# ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜಾನಪದೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ – ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ನಿಬಂಧ




ಸಂಶೋಧಕ

ಗಿರಿಯಪ್ಪ

ನೋಂದಣಿ ಸಂಖ್ಯೆ: 171101030026

ಮಾರ್ಗದರ್ಶಕರು

ಡಾ. ನಾಗವೇಣಿ ಎಸ್.

2018



ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – 575001

# ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜಾನಪದೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ – ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ನಿಬಂಧ






ಸಂಶೋಧಕ

ಗಿರಿಯಪ್ಪ

ನೋಂದಣಿ ಸಂಖ್ಯೆ: 171101030026

ಮಾರ್ಗದರ್ಶಕರು

ಡಾ. ನಾಗವೇಣಿ ಎನ್.

2018

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – 575001

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **'ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜಾನಪದೀಯ ಅಧ್ಯಯನ'** ಎಂಬ ಶೀರ್ಷಿಕೆಯ ಈ ನಿಬಂಧವು ಈ ಸಂಶೋಧಕರ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ **ಡಾ. ನಾಗವೇಣಿ ಎನ್**. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ**

**ಬಲ್ಮಠ, ಮಂಗಳೂರು–೫೭೫೦೦೧**

ಗಿರಿಯಪ್ಪ

**ಸಂಶೋಧಕ**

# ಯೋಗ್ಯತಾ ಪತ್ರ

**ಶ್ರೀ ಗಿರಿಯಪ್ಪ** ನನ್ನ ಸಲಹೆ ಮಾರ್ಗದರ್ಶನದಲ್ಲಿ **'ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜಾನಪದೀಯ ಅಧ್ಯಯನ'** ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿರುತ್ತಾರೆ.

ಈ ಮಹಾ ಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ಕ್ಷೇತ್ರಕಾರ್ಯ, ಅಭಿಪ್ರಾಯ, ಸಂಗ್ರಹ ಸಂದರ್ಶನ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ಮಹಾ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ**
**ಬಲ್ಮಠ, ಮಂಗಳೂರು-೫೭೫೦೦೧**

**ಸಂಶೋಧನಾ ಮಾರ್ಗದರ್ಶಕರು**
**ಡಾ. ನಾಗವೇಣಿ ಎನ್**

# ಪರಿವಿಡಿ

# ಅಧ್ಯಾಯ –1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅಧ್ಯಾಯ –1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## 1.1 ಪ್ರಸ್ತಾವನೆ:

ಕನ್ನಡ ಸಾಹಿತ್ಯ ಇಂದು ಹೆಮ್ಮರವಾಗಿ ಬೆಳೆಯುತ್ತಿದೆ ಅದಕ್ಕೆ ಕಾರಣ ಆಂತರ್ಯದಲ್ಲಿ ಒಳಗೊಂಡಿರುವ ವಿವಿಧ ಪ್ರಕಾರಗಳು. ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕಾಲದಿಂದಲೂ ಕೊಡುಕೊಳ್ಳುವಿಕೆಯನ್ನು ಕಾಣಬಹುದು. ಅನ್ಯಭಾಷೆ, ಅನ್ಯಸಾಹಿತ್ಯ ಹಾಗೂ ಇತರ ಜ್ಞಾನ ಶಿಸ್ತುಗಳನ್ನು ತನ್ನ ತೆಕ್ಕೆಗೆ ಸೇರಿಸಿಕೊಂಡು ಆಧುನಿಕ ಕನ್ನಡ ಸಾಹಿತ್ಯವು ತನ್ನ ಬಾಹುಗಳನ್ನು ವಿಸ್ತರಿಸುತ್ತಾ ಬಂದಿದೆ. ಆಧುನಿಕ ಕನ್ನಡ ಸಾಹಿತ್ಯವು ಜಾನಪದ ಸಾಹಿತ್ಯದ ಜೊತೆಗೆ ಸಮ್ಮಿಳಿತಗೊಂಡು ಮೌಖಿಕ ಪರಂಪರೆಯಾದ ಜಾನಪದ ಇಂದು ವಿಶ್ವಮಾನ್ಯತೆಯನ್ನು ಗಳಿಸಿದೆ. ಜಾನಪದದ ಕಾರಣಕ್ಕಾಗಿ ಕರ್ನಾಟಕದ ಕೆಲವೊಂದು ಪ್ರದೇಶಗಳು ವಿದೇಶದ ಜನರ ಬಾಯಿಯಲ್ಲೂ ಅನುರಣಿಸುವ ಹಾಗೆ ಮಾಡಿದೆ.

ಜನಪದ ಬೇರೆಯಲ್ಲ ಕನ್ನಡ ಸಾಹಿತ್ಯ ಬೇರೆಯಲ್ಲ. ಅಷ್ಟರ ಮಟ್ಟಿಗೆ ಒಂದಕ್ಕೊಂದು ಪೂರಕವಾಗಿದೆ. ಜನಪದ ಸಾಹಿತ್ಯ ಮೌಖಿಕ ಸಾಹಿತ್ಯವಾದರೂ ದಾಖಲೀಕರಣ ಕಾರಣದಿಂದಾಗಿ ಇಂದು ಗ್ರಂಥಸ್ತವಾಗಿ ಬೆಳೆದಿದೆ. ಕನ್ನಡ ನಾಡು ಅನೇಕ ವಿಧದ ಜಾನಪದದ ತವರೂರು ಆಗಿದೆ. ಕಲೆ, ಆರಾಧನೆ, ಸಾಹಿತ್ಯ, ನಂಬಿಕೆ, ನ್ಯಾಯವ್ಯವಸ್ಥೆ ಹೀಗೆ ವಿವಿಧ ಪ್ರಕಾರಗಳನ್ನು ಒಳಗೊಂಡಿದೆ. ಕರ್ನಾಟಕದಲ್ಲಿ ಭಾಷಿಕ ದೃಷ್ಟಿಯಿಂದ ಕನ್ನಡ ಜಾನಪದ ಮತ್ತು ತುಳು ಜಾನಪದ ಎಂದು ವರ್ಗೀಕರಿಸಲಾಗಿದೆ. ಈ ವರ್ಗೀಕರಣದಲ್ಲಿ ಪ್ರಾದೇಶಿಕ ಭಿನ್ನತೆಯೂ ಇದೆ. ಅವಿಭಜಿತ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯನ್ನು ತುಳುನಾಡು ಎಂದು ಕರೆಯುತ್ತಾರೆ. ತುಳು ಭಾಷಿಕರು ಹೆಚ್ಚಾಗಿ ಇರುವುದರಿಂದ ತುಳುನಾಡು ಎಂಬ ಹೆಸರೂ ಬಂದಿದೆ. ಸಂಶೋಧನಾ ದೃಷ್ಟಿಯಿಂದ ವಿವೇಚಿಸುವಾಗ ತುಳುನಾಡಿನಲ್ಲಿ ಜಾನಪದ ಸೊಗಡು ಸಂಪದ್ಭರಿತವಾಗಿದೆ. ಫಿನ್‌ಲ್ಯಾಂಡ್‌ನ ಲೌರಿಹಾಂಕೊ, ಪೀಟರ್ ಜೆ ಕ್ಲಾಸ್, ಜಪಾನಿನ ಸುಮಿಯೊ ಮೊರಿಜಿರಿ ಮೊದಲಾದ ವಿದ್ವಾಂಸರನ್ನು ತುಳುನಾಡು ಆಕರ್ಷಿಸಿದೆ. ಇವರನ್ನು ಇಲ್ಲಿನ ಮಣ್ಣಿನ ಕಲೆ, ಆರಾಧನೆ, ನಂಬಿಕೆಯನ್ನು ಅವರ ದೇಶಗಳಲ್ಲಿ ಪಸರಿಸುವ ಕೆಲಸವನ್ನು ಮಾಡಿದ್ದಾರೆ.

ತುಳು ಜಾನಪದ ಕುರಿತಂತೆ ಅನೇಕ ಸಂಶೋಧನೆಗಳು ನಡೆದಿವೆ. ಇನ್ನೂ ನಡೆಯುತ್ತಿವೆ. ಆದರೆ ಆಹಾರ ಸಂಸ್ಕೃತಿಯ ಭಾಗವಾಗಿರುವ ಮೀನು ಬೇಟೆಗಾರಿಕೆ ಕುರಿತು ಸಂಶೋಧನೆ ನಡೆದಿಲ್ಲ. ಇದು ಅತ್ಯಂತ ಸೃಜನಶೀಲವಾದುದು ಮತ್ತು ಜಾಣ್ಮೆಯಿಂದ ಕೂಡಿದುದು. ಈ ಕುರಿತು ಸಾಂಸ್ಕೃತಿಕವಾದ ಅಧ್ಯಯನಗಳು ನಡೆದು ಮೌಖಿಕ ಪರಂಪರೆಯನ್ನು ಮತ್ತಷ್ಟು ಗಟ್ಟಿಗೊಳಿಸಿಬೇಕೆಂಬ ಇರಾದೆಯಿಂದ

ಮತ್ತು ತುಳುನಾಡಿನಲ್ಲಿ ಈವರೆಗೆ ಸಿಹಿನೀರಿನ ಮೀನು ಬೇಟೆಗಾರಿಕೆಯ ಅಧ್ಯಯನವು ನಡೆಯದಿರುವುದರಿಂದ ನಾನು 'ತುಳುನಾಡಿನ ಸಿಹಿನೀರು ಮೀನುಬೇಟೆಗಾರಿಕೆ ಜಾನಪದೀಯ ಅಧ್ಯಯನ' ಎಂಬ ವಿಷಯದ ಕುರಿತು ಸಂಶೋಧನೆ ನಡೆಸಿರುತ್ತೇನೆ.

## 1.2 ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ:

ಪೀಠಿಕೆಯಲ್ಲಿ ಪ್ರಸ್ತಾಪಿಸಿದ ಹಾಗೆಯೇ ತುಳುನಾಡಿನಲ್ಲಿ ಮತ್ತು ಕನ್ನಡ ಸಾಹಿತ್ಯದಲ್ಲಿ ಬೇಟೆಗಾರಿಕೆಯ ಕುರಿತು ಅಧ್ಯಯನಗಳು ನಡೆದಿವೆ. ಆಧುನೀಕರಣ, ಜಾಗತೀಕರಣ, ವೈಜ್ಞಾನೀಕರಣ ಇತ್ಯಾದಿ ಸವಾಲುಗಳನ್ನು ಎದುರಿಸುತ್ತಿರುವ ಇಂದಿನ ದಿನಗಳಲ್ಲಿ ಜಾನಪದದ ಮೂಲಬೇರು ಅಳಿವಿನ ಅಂಚಿಗೆ ಸಾಗುತ್ತಿವೆ. ಅದರಲ್ಲಿ ಮೀನು ಬೇಟೆಗಾರಿಕೆಯೂ ಒಂದು ತುಳುನಾಡಿನ ಜನರು ಸಾಹಸಿಗರು. ಪಶ್ಚಿಮಕ್ಕೆ ಕಡಲು ಇದೆ, ಪೂರ್ವಕ್ಕೆ ಪಶ್ಚಿಮ ಘಟ್ಟ ಪ್ರದೇಶ ಆವರಿಸಿದೆ. ವಿಸ್ತಾರವಾದ ಜಲರಾಶಿಯಿಂದ ಕೂಡಿದ ಸಮುದ್ರದಲ್ಲಿ ಜೀವದ ಹಂಗು ತೊರೆದು ಜೀವನೋಪಾಯಕ್ಕಾಗಿ ಮತ್ತು ಆಹಾರಕ್ಕಾಗಿ ಮೀನು ಹಿಡಿದರೆ ಸಿಹಿ ನೀರಿನಲ್ಲಿ ಬರೀ ಆಹಾರಕ್ಕಾಗಿ ಮೀನು ಹಿಡಿಯುತ್ತಾರೆ. ಸುಮಾರು ನಲ್ವತ್ತು ವರ್ಷಗಳ ಹಿಂದೆ ನಡೆಯುತ್ತಿದ್ದ ಸಿಹಿನೀರು ಮೀನು ಬೇಟೆಗಾರಿಕೆ ಇತ್ತೀಚಿನ ದಿನಗಳಲ್ಲಿ ಕಣ್ಮರೆಯಾಗಿದೆ. ಮೀನು ಬೇಟೆಗಾರಿಕೆಯಲ್ಲಿ ಬಳಸುವ ವಸ್ತು ಪರಿಕರಗಳು, ವಿಧಾನಗಳು ಬದಲಾಗಿವೆ. ಸಿಹಿನೀರು ಮೀನು ಬೇಟೆಗಾರಿಕೆಯಲ್ಲಿ ಬಳಸುತ್ತಿದ್ದ ಪಾರಂಪರಿಕ ವಸ್ತುಗಳು ವಸ್ತುಸಂಗ್ರಹಾಲಯದ ದಾರಿ ಹಿಡಿದಿವೆ. ಸಿಹಿನೀರು ಮೀನು ಬೇಟೆಗಾರಿಕೆ ಅತ್ಯಂತ ಕಠಿಣವಾದುದು, ಸವಾಲಾದುದು ಮತ್ತು ತಂತ್ರ ಜಾಣ್ಮೆಯಿಂದ ಕೂಡಿದುದು ಇದನ್ನು ದಾಖಲುಗೊಳಿಸುವುದು ಮತ್ತು ಆ ಮೂಲಕ ತುಳು ಜಾನಪದದಲ್ಲಿ ಸಾಂಸ್ಕೃತಿಕ ಅಧ್ಯಯನಕ್ಕೆ ಮನ್ನಣೆಕೊಡುವ ಉದ್ದೇಶದಿಂದ 'ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜಾನಪದ ಅಧ್ಯಯನ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡಿರುತ್ತೇನೆ. 'ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ' ಕುರಿತು ಈವರೆಗೆ ತುಳುನಾಡಿನಲ್ಲಿ ಅಧ್ಯಯನ ನಡೆದಿಲ್ಲ ಅನ್ನುವ ಉದ್ದೇಶದಿಂದ ಆ ವಿಷಯದ ಕುರಿತು ತಲಸ್ಪರ್ಶಿಯಾದ ಅಧ್ಯಯನ/ಸಂಶೋಧನೆ ಮಾಡುವುದೇ ಈ ಅಧ್ಯಯನದ ಉದ್ದೇಶವಾಗಿದೆ.

### ವ್ಯಾಪ್ತಿ:

ತುಳುನಾಡಿನಲ್ಲಿ ಮೀನು ಬೇಟೆಗಾರಿಕೆಗೆ ಸಂಬಂಧಿಸಿದ ಹಾಗೆ ಎರಡು ವಿಭಾಗ ಮಾಡಬಹುದು ಒಂದು ಸಮುದ್ರ/ಉಪ್ಪುನೀರು ಮೀನು ಬೇಟೆಗಾರಿಕೆ. ಇನ್ನೊಂದು ಸಿಹಿನೀರು ಮೀನು ಬೇಟೆಗಾರಿಕೆ. ಉಪ್ಪು ನೀರಿನ ಮೀನು ಬೇಟೆಗಾರಿಕೆ ಅನ್ನುವುದು ಅದು ಉದ್ಯಮ ಮತ್ತು ವಿಸ್ತಾರವಾದ ಜಾಗದಲ್ಲಿ ವಿಭಿನ್ನ ರೀತಿಯ ಮೀನಿನ ವಿಧಗಳಿವೆ ಮತ್ತು ಬೇಟೆಗಾರಿಕೆ ವಿಧಾನವೂ ವಿಭಿನ್ನವಾಗಿದೆ, ಸವಾಲಿನಿಂದ ಕೂಡಿದೆ. ಆದರೆ ಸಿಹಿನೀರಿನ ಮೀನುಗಾರಿಕೆ ಎನ್ನುವುದು ಹಲವು ಋತುಗಳಲ್ಲಿ ಹಲವು ರೀತಿಯ ವಿಧಾನವನ್ನು ಅನುಸರಿಸುವಂತಹುದಾಗಿದೆ. ಇಲ್ಲಿ ಸಿಹಿನೀರಿನ ಮೀನು ಬೇಟೆಗಾರಿಕೆಯನ್ನು ಅಧ್ಯಯನಕ್ಕೆ

ಆರಿಸಲಾಗಿದೆ. ಸಿಹಿನೀರಿನ ಮೂಲವು ನದಿ, ತೋಡು, ಕಣಿವೆ, ಕೆರೆಗಳಾಗಿವೆ. ಇವುಗಳಿಗೆ ಅನುಗುಣವಾಗಿ ಪರಿಕರಗಳನ್ನು ಬಳಸಲಾಗುತ್ತದೆ ಮತ್ತು ಮೀನಿನ ವಿಧಗಳಲ್ಲಿಯೂ ವ್ಯತ್ಯಾಸಗಳಿವೆ. ಸಿಹಿನೀರಿನ ಮೀನು ಬೇಟೆಗಾರಿಕೆಯು ಸಿಹಿನೀರಿನಲ್ಲಿ ಜೀವಿಸುವ ಮೀನು, ಸಿಗಡಿ, ಏಡಿ ಮತ್ತು ಆಮೆ, ಪಾಲೆವು ಇವುಗಳ ವಿಭಿನ್ನ ರೀತಿಯ ಬೇಟೆಗಾರಿಕೆಯನ್ನು ಒಳಗೊಂಡಿದೆ. ಗಾಳ ಹಾಕುವ ವಿಧಾನಗಳನ್ನು ನಿರೂಪಿಸಲಾಗಿದೆ. ಮೊರಂಟೆ ಮೀನುಗಾಳ, ಪಾಚೊಳ್ತಿ ಮೀನುಗಾಳ, ಮಲೆಜ್ಜಿ/ಹಾವು ಮೀನುಗಾಳ, ನೊಲಿ/ಪುರಿಯೋಲು ಮೀನುಗಾಳ, ಮಡೆಂಜಿ/ಗೆಂಡೆ ಮೀನುಗಾಳ ಇತ್ಯಾದಿ. ಇವು ಗಾಳ ಹಾಕಿ ಮೀನು ಹಿಡಿಯುವ ವಿಧಾನವಾಗಿದೆ. ಇವೆಲ್ಲವನ್ನೂ ಇಲ್ಲಿ ಸವಿವರವಾಗಿ ಗಮನಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕಡು ಹಾಕುವ ವಿಧಾನ/ವಿಷ ಹಾಕುವ ವಿಧಾನದಲ್ಲಿ 2 ವಿಧಗಳಿವೆ. ಪಾರಂಪರಿಕ ವಿಧಾನ ಮತ್ತು ಆಧುನಿಕ ವಿಧಾನ. ಪಾರಂಪರಿಕ ವಿಧಾನ ಪ್ರಾಕೃತಿಕ ವಸ್ತುಗಳನ್ನು ಬಳಸಿಕೊಂಡು ಕಡು ಹಾಕುವ ವಿಧಾನವನ್ನು ನಿರೂಪಿಸಲಾಗಿದೆ. ಬ್ಯಾರಿಬಿತ್ತ್, ಕಾರೆಕಾಯಿ, ಮಡೆಂಜಿ ಬಿಳಲು, ಒಡ್ಯೆ ಬಿಳಲು, ತಿಪುಳ ಹಾಕುವುದು/ಇಪುಳ ಹಾಕುವುದು ಅದೆಂಜಿ ಮರದ ಚಕ್ಕೆ, ರಾಯಿಬೀಜ ಮರದ ಸೊಪ್ಪು, ಪಣೆ ಮರದ ಕಾಯಿ, ಕವಟೆ ಮರದ ಕಾಯಿ ಇವುಗಳನ್ನು ನೀರಿಗೆ ಹಾಕಿ ಮೀನು ಬೇಟೆಗಾರಿಕೆ ಮಾಡುವುದು, ಆಧುನಿಕ ವಿಧಾನದಲ್ಲಿ ಮೈಲುತುತ್ತು ಹಾಕುವುದು ಎಂಡೋಸಲ್ಫಾನ್, ಪೆರಡಾನ್/ಪೆರಡಾಕ್ಸ್, ವೆಲ್ಡಿಂಗ್ ಸುಣ್ಣ ಇತ್ಯಾದಿ ವಸ್ತುಗಳನ್ನು ನೀರಿಗೆ ಹಾಕಿ ಮೀನುಗಳನ್ನು ಹಿಡಿಯುವ ಬೇಟೆ ವಿಧಾನವನ್ನು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸಿಹಿನೀರಿನ ಮೀನು ಬೇಟೆಗಾರಿಕೆಯಲ್ಲಿ ಕೆಲವೊಂದು ವಸ್ತುಪರಿಕರಗಳನ್ನು ಬಳಸಿಕೊಂಡು ಮೀನು ಹಿಡಿಯುವ ವಿಧಾನಗಳನ್ನು ದಾಖಲಿಸಲಾಗಿದೆ. ವಸ್ತುಪರಿಕರಗಳೆಂದರೆ ಮಕ್ಕೆರಿ/ಮಂಕರಿ, ಕೂರಿ, ಕಾಂಡೇರಿ, ಕೂಂಜೋಲು, ತೇಪೆ/ಏಪೆ/ಏಂಪೆ, ಬಲೆ, ಒಣ ಅಡಿಕೆ ಮರ, ಟೊಳ್ಳು ಮರ, ಬಿದಿರು, ಬಟ್ಟಲು ಇತ್ಯಾದಿ ವಸ್ತುಗಳನ್ನು ಬಳಸಿಕೊಂಡು ಮೀನು ಬೇಟೆಗಾರಿಕೆಯನ್ನು ನಿರೂಪಿಸಲಾಗಿದೆ.

ಅಧ್ಯಾಯ ಐದರಲ್ಲಿ ಸ್ಫೋಟಕಗಳ ಬಳಕೆ ಕುರಿತಂತೆ ಮೀನು ಬೇಟೆಗಾರಿಕೆ ಮಾಡುವ ವಿಧಾನಗಳನ್ನು ದಾಖಲಿಸಿಕೊಳ್ಳಲಾಗಿದೆ. ಗ್ರೆನೇಡ್ ಬಳಕೆ ಹಾಗೂ ಗರ್ನಾಲ್ ಸ್ಫೋಟಿಸಿ ಮೀನು ಹಿಡಿಯುವ ರೀತಿಯನ್ನು ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ತುಳು ಜಾನಪದ ಸಾಹಿತ್ಯದಲ್ಲಿ ದಾಖಲುಗೊಂಡಿರುವ ಮೀನಿನ ಕುರಿತಾದ ಕತೆಗಳು, ಜಿಡಿ ಕವಿತೆಗಳು, ಗಾದೆಗಳನ್ನು ಬಳಸಿಕೊಂಡು ಆ ಮೂಲಕ ತೆರೆಮರೆಗೆ ಸರಿಯುತ್ತಿರುವ ಸಿಹಿನೀರು ಮೀನು ಬೇಟೆಗಾರಿಕೆಯ ಪಾರಂಪರಿಕ ವಿಧಾನವನ್ನು ದಾಖಲಿಸುವುದು ಈ ಅಧ್ಯಯನದ

ವ್ಯಾಪ್ತಿ. ಇದಕ್ಕೆ ದ.ಕ ಜಿಲ್ಲೆಯ ಬೆಳ್ತಂಗಡಿ, ಪುತ್ತೂರು, ಸುಳ್ಯ, ಮೂಡಬಿದ್ರೆ, ಬಂಟ್ವಾಳ ಹಾಗೂ ಉಡುಪಿ ತಾಲೂಕಿನ ಕುಂದಾಪುರ ತಾಲೂಕುಗಳಲ್ಲಿ ಕ್ಷೇತ್ರ ಕಾರ್ಯವನ್ನು ನಡೆಸಿ ಮಾಹಿತಿ ಸಂಗ್ರಹಿಸಿಕೊಳ್ಳಲಾಗಿದೆ.

## 1.3 ಅಧ್ಯಯನದ ಸ್ವರೂಪ:

'ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜನಪದ ಅಧ್ಯಯನ'ವು ಕ್ಷೇತ್ರ ಕಾರ್ಯ ಆಧಾರಿತ ಅಧ್ಯಯನವಾಗಿದೆ. ಈ ಕ್ಷೇತ್ರ ಕಾರ್ಯವನ್ನು ಉಡುಪಿ ತಾಲೂಕಿನ ಕುಂದಾಪುರ, ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ, ಪುತ್ತೂರು, ಸುಳ್ಯ, ಮೂಡಬಿದ್ರೆ ಹಾಗೂ ಬಂಟ್ವಾಳ ತಾಲೂಕಿನ ಕೆಲವೊಂದು ಸ್ಥಳಗಳಲ್ಲಿ ಭೇಟಿ ನೀಡಿ ಕ್ಷೇತ್ರ ಕಾರ್ಯ ನಡೆಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕೆಲವರು ಸ್ವಂತ ಅನುಭವವನ್ನು ವಿವರಿಸಿದರೆ ಇನ್ನು ಕೆಲವರು ಅವರ ಹಿರಿಯರ ಅನುಭವವನ್ನು ನಿರೂಪಿಸಿದ್ದಾರೆ. ಸಿಹಿನೀರಿನ ಮೀನು ಬೇಟೆಗಾರಿಕೆ ಸಂಪೂರ್ಣವಾಗಿ ಕ್ಷೇತ್ರ ಕಾರ್ಯ ಆಧಾರಿತ ಸಂಶೋಧನೆ ಮತ್ತು ಜನಪದ ಕತೆ, ಬಿಡಿ ಕವಿತೆಗಳು, ಗಾದೆಗಳಲ್ಲಿ ಒಳಗೊಂಡಿರುವ ಮೀನಿನ ಉಲ್ಲೇಖಗಳನ್ನು ಬಳಸಿಕೊಳ್ಳಲಾಗಿದೆ. ಮತ್ತು ಇತರ ಬೇಟೆಯ ಕುರಿತಂತೆ ಈವರೆಗೆ ಆಗಿರುವ ಅಧ್ಯಯನವನ್ನು ಅವಲೋಕಿಸಲಾಗಿದೆ. ವಸ್ತುಪರಿಕರಗಳಿಗೆ ಸಂಬಂಧಿಸಿದ ಹಾಗೆ ಮಾಹಿತಿ ಲಭ್ಯವಾಗಿದೆ ಆದರೆ ವಸ್ತು ಪರಿಕರಗಳು ಕಾಣ ಸಿಕ್ಕಿರುವುದಿಲ್ಲ. ಅಧ್ಯಾಯದಲ್ಲಿ ಉಲ್ಲೇಖ ಆಗಿರುವ ಎರಡು ಕತೆಗಳಲ್ಲಿ ಈಗಾಗಲೇ ಕೃತಿಯಲ್ಲಿ ದಾಖಲೆಗೊಂಡಿರುವುದನ್ನು ಯಥಾವತ್ತಾಗಿ ಬಳಸಿಕೊಳ್ಳಲಾಗಿದೆ. ಆದರೆ ಇನ್ನೊಂದು ಕತೆಯನ್ನು ಕ್ಷೇತ್ರ ಕಾರ್ಯ ಮಾಡುವ ಸಂದರ್ಭದಲ್ಲಿ ಸಂಗ್ರಹಿಸಲಾಗಿದೆ. ತುಳು ಗಾದೆಗಳನ್ನು ಕೆಲವುಗಳನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಮತ್ತೆ ಕೆಲವೊಂದನ್ನು ಪಠ್ಯದಿಂದ ಆಯ್ದುಕೊಳ್ಳಲಾಗಿದೆ ಹಾಗೂ ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರ ಸಂಚಯಗಿರಿ ಬಿ.ಸಿ.ರೋಡ್ ಬಂಟ್ವಾಳ ತಾಲೂಕು ಇಲ್ಲಿ ಬೇಟಿ ನೀಡಿ ಮಾಹಿತಿಗಳನ್ನು ಕಲೆ ಹಾಕಲಾಗಿದೆ.

## 1.4 ಈವರೆಗೆ ನಡೆದಿರುವ ಅಧ್ಯಯನಗಳು

ಮನುಷ್ಯ ಹುಟ್ಟಿನೊಂದಿಗೆ ಬೇಟೆಯನ್ನು ಜೀವನಾಧಾರವಾಗಿ ಬಳಸಿಕೊಂಡು ಬಂದಿರುತ್ತಾನೆ ಪ್ರಾಣಿ, ಪಕ್ಷಿ ಹೀಗೆ ಪ್ರತಿಯೊಂದು ಜೀವಿಗಳಲ್ಲೂ ಆಹಾರಕ್ಕಾಗಿ ಬೇಟೆಯನ್ನಾಡುತ್ತವೆ. ಪ್ರಾಣಿ, ಪಕ್ಷಿ, ಮೀನು, ಕೀಟ ಈ ಜೀವ ಸಂಕುಲದಲ್ಲಿ ಬಲಶಾಲಿಯಾದುದು, ದುರ್ಬಲರನ್ನು, ದೊಡ್ಡ ಜೀವಿಗಳು ಚಿಕ್ಕ ಜೀವಿಗಳನ್ನು ನೇರವಾಗಿ ಅಥವಾ ಹೊಂಚುಹಾಕಿ ಬೇಟೆಯಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತವೆ. ಈ ರೀತಿ ಬೇಟೆಯಾಡುವ ಪ್ರಕ್ರಿಯೆಯು (ಕನ್ನಡ ಸಾಹಿತ್ಯದಲ್ಲಿ ರಾಘವಾಂಕ, ಷಡಕ್ಷರ ಈ ಕವಿಗಳ ಕೃತಿಗಳಲ್ಲಿ) ಹಳೆಗನ್ನಡ ಸಾಹಿತ್ಯದಿಂದಲೇ ದಾಖಲಾಗಿರುವುದನ್ನು ನಾವು ಕಾಣಬಹುದು. ಆಧುನಿಕ ಸಾಹಿತ್ಯ ಘಟ್ಟದಲ್ಲಿ ಬೇಟೆಯ ಅನುಭವಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಸೇರಿಸಿದ ಮೊದಲಿಗರೆಂದರೆ ಕೆದಂಬಾಡಿ ಜತ್ತಪ್ಪ ರೈ. ಇವರು ಪೂರ್ಣ ಪ್ರಮಾಣದಲ್ಲಿ ಬೇಟೆಯ ನೆನಪುಗಳನ್ನು ದಾಖಲೆಗೊಳಿಸಿದ್ದಾರೆ. ಕುವೆಂಪು ಪೂರ್ಣಚಂದ್ರ ತೇಜಸ್ವಿ ಇವರ ಬರವಣಿಗೆಗಳಲ್ಲಿ ಕಿರುಪರಿಚಯ ಅಥವಾ ಉಲ್ಲೇಖ ಮಾತ್ರವಿದೆ. ಆದರೆ

ಕೆದಂಬಾಡಿ ಜತ್ತಪ್ಪ ರೈಯವರು ತಮ್ಮ ಅನುಭವಗಳನ್ನು ಓದುವ ವರ್ಗಕ್ಕೆ ತೆರೆದಿಡುವ ಕೆಲಸವನ್ನು ಮಾಡಿದ್ದಾರೆ. ಕೆದಂಬಾಡಿ ಜತ್ತಪ್ಪ ರೈಯವರ ಕೃತಿಗಳೆಂದರೆ 'ಬೇಟೆಯ ಉರುಳು', (ಭಾವೀ ಜನಾಂಗಕ್ಕೆ) 'ಬೇಟೆಯ ನೆನಪುಗಳು', 'ಬಟ್ಟದ ತಪ್ಪಲಿನಂತ ಕಡಲ ತಡಿಗೆ' ಇತ್ಯಾದಿ ಕೃತಿಗಳು. ಉಮೇಶ್ ಹೊಸಹಳ್ಳಿ ಅವರ 'ಮಲೆನಾಡಿನ ಶಿಕಾರಿ ಬೇಟೆ', ಪ್ರಭಾಕರ ಶಿಶಿಲ ಅವರ 'ಶಿಕಾರಿಯ ಸೀಳು ನೋಟ'. ಈ ಕೃತಿಗಳಲ್ಲಿ ಪ್ರಾಣಿ ಬೇಟೆಯ ವಿವಿಧ ಹಂತ, ವಿಧಾನಗಳು ಬಳಸುವಂತಹ ತಂತ್ರೋಪಾಯಗಳನ್ನು ವಿವರಿಸಲಾಗಿದೆ.

ಡಾ. ನರೇಂದ್ರ ರೈ ಇವರ 'ಬೇಟೆ ಪ್ರಭುತ್ವದಿಂದ ಪ್ರಜಾಪ್ರಭುತ್ವದೆಡೆಗೆ' 'ಕನ್ನಡದಲ್ಲಿ ಬೇಟೆ ಸಾಹಿತ್ಯ' ಕನ್ನಡ ಸಾಹಿತ್ಯದಲ್ಲಿ ಮೂಡಿಬಂದ ಮೀನು ಬೇಟೆ ಕುರಿತಾಗಿ ಸ್ವಲ್ಪ ವಿವರ ನೀಡಿದ್ದಾರೆ. ಶ್ರೀಯುತರು ಮೀನು ಬೇಟೆಯ ವೈಶಾಲ್ಯದ ಬಗ್ಗೆ ಕವಿ ರಾಘವಾಂಕನ ಪದ್ಯದ ಸಾಲುಗಳನ್ನು ಉಲ್ಲೇಖಿಸಿದ್ದಾರೆ. ತುಳು ಜಾನಪದ ವಿಷಯದ ಕುರಿತಂತೆ ಪ್ರಕಟಗೊಂಡ ಮೊದಲ ಕೃತಿ ಪ್ರೊ. ಬಿ.ಎ ವಿವೇಕ ರೈ ಅವರ 'ತುಳು ಜನಪದ ಸಾಹಿತ್ಯ' ಈ ಕೃತಿಯಲ್ಲಿ ಬಾಲೆ ಮೀನ್ ಮುಗುಡು ಮೀನು ಆದ ಕತೆ ಮತ್ತು ಮೀನಿಗೆ ಸಂಬಂಧಿಸಿದ ಹಾಗೆ ಕವಿತೆಗಳ ಉಲ್ಲೇಖಗಳಿವೆ ಡಾ. ದೇವೇಂದ್ರ ಕುಮಾರ ಹಕಾರಿ, ಡಾ. ಕೆ.ಆರ್ ಸಂಧ್ಯಾ ರೆಡ್ಡಿಯವರ ಗ್ರಾಮೀಣ ಬೇಟೆ ಕೃತಿಯಲ್ಲಿ ಬಯಲು ಸೀಮೆಯಲ್ಲಿ ಮೀನು ಬೇಟೆಗಾರಿಕೆ ಕುರಿತಂತೆ ಉತ್ತರ ಕರ್ನಾಟಕ ಭಾಗದಲ್ಲಿ ಮೀನು ಬೇಟೆ ಕುರಿತ ವಿವರಗಳಿವೆ. ಈ ಮೇಲೆ ಉಲ್ಲೇಖಿಸಿದ ಕೃತಿಗಳನ್ನು ಹೊರತು ಪಡಿಸಿ ತುಳುನಾಡಿನ ಸಿಹಿ ನೀರು ಮೀನು ಬೇಟೆಗಾರಿಕೆ ಸಂಬಂಧಿಸಿದ ಹಾಗೆ ತಲಸ್ಪರ್ಶಿಯಾದ ಅಧ್ಯಯನಗಳು ನಡೆದಿರುವುದಿಲ್ಲ.

## ಅಧ್ಯಾಯ –2

# ಗಾಳ ಹಾಕುವ ವಿಧಾನ

## ಅಧ್ಯಾಯ –2

# ಗಾಳ ಹಾಕುವ ವಿಧಾನ

ಮೀನು ಬೇಟೆಗಾರಿಕೆಯಲ್ಲಿ ಗಾಳ ಹಾಕುವುದು / ಹಾಕಿ ಮೀನು ಹಿಡಿಯುವುದು ಪಾರಂಪರಿಕ ವಿಧಾನವಾಗಿದೆ. ಗಾಳ ಹಾಕಿ ಮೀನು ಹಿಡಿಯುವುದು ಒಂದು ಸೃಜನಶೀಲ ಪ್ರಕ್ರಿಯೆ. ಮೀನು ಹಿಡಿಯುವ ಕಾರ್ಯವನ್ನು ಅದು ಅಂತರ್ಯದಲ್ಲಿ ಸಂವಹನಗೊಳ್ಳುವ ರೀತಿಯನ್ನು ಸಂಶೋಧಕನ ಧ್ಯಾನಸ್ಥ ಸ್ಥಿತಿಗೆ ಹೋಲಿಸಲಾಗಿದೆ. ಲೋಹದಿಂದ ತಯಾರಿಸಿದ ಗಾಳಕ್ಕೆ ಸಿಕ್ಕಿಸಿದ ಆಹಾರವನ್ನು ಮೀನು ಕುಕ್ಕಿ ತಿನ್ನುವಾಗ ಸುಮಾರು ಕೆಲವು ಮೀಟರ್ ಉದ್ದದ ಪಾಲಿಥೀನ್ ನೂಲಿನ (Fishing Line) ಮೂಲಕ ಮೀನುಗಾರನ ತಲೆಗೆ ಸಂದೇಶ ರವಾನೆಯಾದಾಗ ಆತನ ಮೆದುಳು ತಕ್ಷಣ ಜಾಗೃತಗೊಳ್ಳುತ್ತದೆ. ಆಗ ಆತ ಕಾರ್ಯಪ್ರವೃತ್ತನಾಗುತ್ತಾನೆ. ಮೀನನ್ನು ಹಿಡಿಯಲು ತಯಾರು ನಡೆಸುತ್ತಾನೆ. ಇಲ್ಲಿ ಅಂತರ್ ಸಂವಹನ ಪ್ರಕ್ರಿಯೆ ನಡೆಯುತ್ತದೆ. ಉತ್ತರ ಕರ್ನಾಟಕ ಭಾಗದಲ್ಲಿ ಮೀನು ಹಿಡಿಯುವಿಕೆಯ ಕ್ರಿಯೆಗೆ ಸಂಬಂಧಪಟ್ಟ ಹಾಗೆ ಒಂದು ಲಾವಣಿ ಈ ರೀತಿ ಇದೆ. ಗಾಳಕ್ಕೆ ಸಿಕ್ಕಿಸಿದ ಎರೆಹುಳವೊಂದು ಈ ರೀತಿ ಹೇಳುತ್ತದೆ.

ಸುತ್ತಿ ಸುತ್ತಿ ಬರಬೇಡ ಎನಗಾಗಿ
ಸುತ್ತಿ ಸುತ್ತಿ ಬರಬೇಡ ಎನಗಾಗಿ
ಮೇಲೊಬ್ಬ ಕಾದು ಕುಳಿತಿಹನು ನಿನಗಾಗಿ

ಗಾಳ ಹಾಕುವ ವಿಧಾನಗಳಲ್ಲಿ ಅನೇಕ ವಿಧಗಳಿವೆ. ತುಳುನಾಡಿನಲ್ಲಿ ಗಾಳ ಹಾಕುವ ವಿಧಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಪಡೆದುಕೊಳ್ಳುತ್ತವೆ/ಪಡೆದುಕೊಂಡಿವೆ. ಮೀನಿನ ಗಾತ್ರ ಅದರ ಆಹಾರ ಕ್ರಮ ಅದು ತನ್ನ ಆಹಾರ ಬೇಟೆಯನ್ನು ಮಾಡುವ ವಿಧಾನಕ್ಕೆ ಅನುಗುಣವಾಗಿ ಗಾಳವನ್ನು ಮತ್ತು ಅದಕ್ಕೆ (ಗಾಳಕ್ಕೆ) ಆಹಾರವನ್ನು ಪೋಣಿಸುತ್ತಾ ಹೋಗುತ್ತಾರೆ. ಗಾಳ ಹಾಕುವ ವಿಧಾನಗಳನ್ನು ಮುಂದೆ ಚರ್ಚಿಸುವ ಸಂದರ್ಭದಲ್ಲಿ ಅದರ ಆಹಾರ. ಗಾಳದ ಗಾತ್ರ ಮತ್ತು ಬಳಸುವ ವಸ್ತು ಪರಿಕರಗಳ ಕುರಿತಂತೆ ವಿವರಗಳನ್ನು ಈ ಕೆಳಗಿನಂತೆ ಕಾಣಬಹುದು.

### 2.1 ಮೊರಂಟೆ ಮೀನಿನ ಗಾಳ:

'ಮೊರಂಟೆ' ಎಂದರೆ ಸಣ್ಣ ಗಾತ್ರದ ಮೀನು. ಇದು ಸಾಮಾನ್ಯವಾಗಿ ಗದ್ದೆಯ ಬದು, ಬಾವಿ, ಕೆರೆ, ಹಳ್ಳ, ಚಿಕ್ಕ– ಚಿಕ್ಕ ತೋಡುಗಳಲ್ಲಿ ವಾಸಿಸುತ್ತದೆ. ಈ ಜಾತಿಯ ಮೀನುಗಳು ಎಲೆಯ ಮರೆಯಲ್ಲಿ, ಚಿಕ್ಕ ಬಿಲಗಳಲ್ಲಿ, ಹುಲ್ಲಿನ ಮಧ್ಯದಲ್ಲಿ, ಕಲ್ಲುಗಳ ಸಂದುಗಳಲ್ಲಿ ಆಹಾರಕ್ಕಾಗಿ ಹೊಂಚು ಹಾಕುತ್ತಾ ಇರುತ್ತವೆ. ನೀರಿಗೆ ಬೀಳುವ ಯಾವುದೇ ಕ್ರಿಮಿ ಕೀಟಗಳನ್ನು ತಕ್ಷಣ ಧಾವಿಸಿ ನುಂಗುವ ಸ್ವಭಾವದ ಮೀನು. ಈ ಮೀನಿನ ಬೇಟೆಯನ್ನು ಹಳ್ಳಿಗಾಡಿನಲ್ಲಿ ಚಿಕ್ಕಮಕ್ಕಳು ಹೆಚ್ಚಾಗಿ ಹವ್ಯಾಸವಾಗಿ

ಬೆಳೆಸಿಕೊಂಡಿರುತ್ತಾರೆ. ಮಳೆಗಾಲ ಕಡಿಮೆಯಾದ ತಕ್ಷಣ ಅಂದರೆ ಸಪ್ಟೆಂಬರ್, ಅಕ್ಟೋಬರ್, ನವಂಬರ್ ತಿಂಗಳಿನಲ್ಲಿ ಗದ್ದೆ ಕೊಯಿಲು ಆದ ನಂತರ ಅದರ ಬೇಟೆಯನ್ನು ಆರಂಭಿಸುತ್ತಾರೆ.

**ಗಾಳ ತಯಾರಿಸುವ ವಿಧಾನ:**

ಸಾಮಾನ್ಯವಾಗಿ (ಈಂದ್) ಬೈನೆಮರದ ಗೆಲ್ಲನ್ನು ತಂದು ಸುಮಾರು ಎರಡು ಮೀಟರ್ ಉದ್ದದಷ್ಟು ತುಂಡು ಮಾಡುತ್ತಾರೆ. ಒಂದೂವರೆ ಮೀಟರ್‌ನಷ್ಟು ಉದ್ದ ಮುಂದಕ್ಕೆ ನೈಲಾನ್ ತಂತಿಯನ್ನು ಇಳಿಬಿಡುತ್ತಾರೆ. ಅಂತೆಯೇ ಒಂದು ಮೀಟರ್ ಉದ್ದದ ನೈಲಾನ್ ತಂತಿಯನ್ನು ಬೈನೆಮರದ ಗೆಲ್ಲಿಗೆ ಸ್ಪ್ರಿಂಗ್ ಆಕಾರದಲ್ಲಿ ಸುತ್ತುತ್ತಾರೆ. ತಂತಿಯ ತುದಿಗೆ ಚಿಕ್ಕ ಗಾತ್ರದ ಗಾಳವನ್ನು ಸಿಕ್ಕಿಸುತ್ತಾರೆ. ಜೊತೆಗೆ ಗಾಳದಿಂದ ಒಂದು ಅಡಿ ಮೇಲಕ್ಕೆ ನೈಲಾನ್ ತಂತಿಗೆ ಸೀಸವನ್ನೂ ಜೋಡಿಸುತ್ತಾರೆ. ಸೀಸವನ್ನು ಸಾಮಾನ್ಯವಾಗಿ ಸಣ್ಣದಾಗಿ ಕತ್ತರಿಸಿ ತೆಂಗಿನ ಗರಿಯ ಕಡ್ಡಿಯಷ್ಟು ತೆಳ್ಳಗೆ ಮಾಡಿ ಸ್ಪ್ರಿಂಗ್ ಗಾತ್ರದಲ್ಲಿ ಪಾಲಿಥಿನ್ ತಂತಿಗೆ ಭದ್ರವಾಗಿ ಜೋಡಿಸುತ್ತಾರೆ. ಎಷ್ಟು ವೇಗವಾಗಿ ಎಳೆದರೂ ಸೀಸದ ಸ್ಪ್ರಿಂಗ್ ಗಾಳದ ಸಮೀಪಕ್ಕೆ ಜಾರದ ಹಾಗೆ ಗಟ್ಟಿಯಾಗಿ ಸುತ್ತುತ್ತಾರೆ. ಪಾಲಿಥಿನ್ ತಂತಿಯು ಕೋಲಿಗಿಂತ ಹೆಚ್ಚು ಉದ್ದವಾದರೆ ಮೀನನ್ನು ಹಿಡಿದು ಎಳೆಯುವಾಗ ಗಾಳವು ಮರದ ಗೆಲ್ಲುಗಳ ಮೇಲೆ, ಗಿಡಗಳಲ್ಲಿ ಸಿಕ್ಕಿಹಾಕಿಕೊಳ್ಳುವ ಸಂದರ್ಭಗಳು ಇರುವುದರಿಂದ ತಂತಿಯನ್ನು ಹೆಚ್ಚು ಉದ್ದವಾಗಿ ಬಳಸುವುದಿಲ್ಲ.

**ಬೇಟೆಯ ವಿಧಾನ:**

ತೆಂಗಿನ ಗೆರಟೆಯಲ್ಲಿ ಸ್ವಲ್ಪ ಎರೆಹುಳವನ್ನು ಇಟ್ಟುಕೊಂಡು ಎರೆಹುಳ ಹೊರಬಾರದ ಹಾಗೆ ಸ್ವಲ್ಪ ಮಣ್ಣನ್ನು ಹಾಕುತ್ತಾರೆ. ಗಾಳದ ತುದಿಗೆ ಎರೆಹುಳವನ್ನು ಗಾಳದ ಉದ್ದದಷ್ಟು ಪೋಣಿಸಿ ಗಾಳದ ಎರೆಹುಳಕ್ಕೆ ಎಂಜಲು ಉಗಿದು ನೀರಿನಲ್ಲಿ ಗಾಳವನ್ನು ಇಳಿಬಿಟ್ಟು ಗಾಳವನ್ನು ಕುಣಿಸುತ್ತಿರಬೇಕು. ಮೂಲೆಯಲ್ಲಿ ಅವಿತುಕೊಂಡಿರುವಂತಹ ಈ ಮೊರಂಟೆ ಮೀನುಗಳು ಬಂದು ಗಾಳದ ಆಹಾರವನ್ನು ಕಚ್ಚಿಕೊಂಡು ಓಡುವಾಗ ಅದು ಓಡುವ ವಿರುದ್ಧ ದಿಕ್ಕಿಗೆ ಎಳೆಯಬೇಕು. ಆಗ ಗಾಳದಲ್ಲಿ ಮೊರಂಟೆಮೀನು ಸಿಕ್ಕಿ ಹಾಕಿಕೊಳ್ಳುತ್ತವೆ. ಮೊರಂಟೆ ಮೀನಿನ ಬಾಯಿಯು ಅಗಲವಾಗಿರುವುದರಿಂದ ಹೀಗೆ ವಿರುದ್ಧವಾಗಿ ಎಳೆಯುತ್ತಾರೆ. ಮೀನು ಸಾಂಬಾರು ಮಾಡುವ ಸಂದರ್ಭದಲ್ಲಿ ಅದರ ತಲೆಯನ್ನು ತುಂಡರಿಸಿ ಬಿಸಾಡುತ್ತಾರೆ. ಈ ಮೀನು ಹುರುಪೆಗಳಿರುವ ಮೀನು ಮತ್ತು ನೆಲದ ಮೇಲೆ ಹಾವಿನ ರೀತಿಯಲ್ಲಿ ಬಾಲವನ್ನೂ ಮುದುರಿಸಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಮೀಟರ್‌ನಷ್ಟು ಉದ್ದ ಹಾರುವ ಗುಣವನ್ನೂ ಹೊಂದಿರುತ್ತದೆ. ಹಳ್ಳಿಗಳಲ್ಲಿ ಚಿಕ್ಕ ಮಕ್ಕಳು ತೊಂದರೆ/ಕೀಟಲೆ ಕೊಡುವ ಹಾರಾಟ ಮಾಡುವ ಪ್ರವೃತ್ತಿ ಉಳ್ಳವರಾಗಿದ್ದರೆ ಅವರಿಗೆ 'ನೀನೇನು ಮೊರಂಟೆ ಮೀನು ಹಾರಿದ ಹಾಗೆ ಹಾರುತ್ತೀಯ' ಅನ್ನುವ ಮಾತುಗಳನ್ನು ಹಿರಿಯರು ಹೇಳುವ ಪ್ರತೀತಿ ಇದೆ.

## 2.2 ಪಾಚೋಳ್ತಿ ಮೀನು/ಪಾಚೆಲ್ ತರು ಗಾಳ:

ಪಾಚೊಳ್ತಿ/ಪಾಚೆಲ್ ತರು ಸಣ್ಣ ಗಾತ್ರದ ಮೀನು. ಇದು ನೀಲಿಮಿಶ್ರಿತ ಬಣ್ಣವನ್ನು ಹೊಂದಿರುವ ಹುರುಪೆಗಳಿರುವ, ಬಾಲದಲ್ಲಿ ಬಿಳಿ ಎರಡು ಚುಕ್ಕೆಗಳನ್ನು ಹೊಂದಿರುವ ಮೀನು. ಮಳೆಗಾಲದಲ್ಲಿ ಮತ್ತು ಮಳೆಗಾಲ ಕಳೆದ ಬಳಿಕ ರಭಸವಾಗಿ ಹರಿಯುವ ನೀರಿನಲ್ಲಿ ಈಜಾಡಿಕೊಂಡು ಆಹಾರದ ಅನ್ವೇಷಣೆಯಲ್ಲಿ ತೊಡಗಿರುತ್ತದೆ. ಇದು ತುಂಬಾ ರುಚಿಕರವಾದ ಮೀನಾಗಿರುತ್ತದೆ. ಈ ಮೀನಿನ ಗಾತ್ರ ಹೆಚ್ಚೆಂದರೆ ನೂರು ಗ್ರಾಂನಷ್ಟು ಇರುತ್ತದೆ.

**ಗಾಳದ ವಿಧಾನ/ಗಾಳ ತಯಾರಿಸುವ ವಿಧಾನ**

ಬೈನೆ ಮರದ ಕೈ(ಗೆಲ್ಲನ್ನು)ಯನ್ನು ತಂದು ಬಿಸಿಲಿನಲ್ಲಿ ಒಣಗಿಸುತ್ತಾರೆ. ಹಿಂದೆ ಉಲ್ಲೇಖಿಸಿದ ಹಾಗೆ ಪಾಲಿಥಿನ್ ಹಗ್ಗವನ್ನು(ತಂತಿಯನ್ನು) ಗೆಲ್ಲಿನ ತುದಿಯಿಂದ ಸುಮಾರು ಎರಡು ಮೀಟರ್‌ನಷ್ಟು ಇಳಿಬಿಡುತ್ತಾರೆ. ಅದೇ ರೀತಿ ಗೆಲ್ಲಿನ ತುದಿಯಿಂದ ಒಂದು ಮೀಟರ್‌ನಷ್ಟು ಉದ್ದದ ಪಾಲಿಥಿನ್ ದಾರವನ್ನು ಬೈನೆಮರದ ಕೋಲಿಗೆ ಸುತ್ತುತ್ತಾರೆ. ಈ ರೀತಿ ಸುತ್ತುವ ಮುಖ್ಯ ಉದ್ದೇಶವೇನೆಂದರೆ ಅಕಸ್ಮಾತ್ ಯಾವುದೋ ದೊಡ್ಡ ಮೀನು ಗಾಳವನ್ನು ಚುಚ್ಚಿ ಎಳೆದೊಯ್ದರೆ ಬೈನೆ ಮರದ ಕೋಲಿನ ತುದಿಯು ತುಂಡಾದರೆ, ತುದಿಯಿಂದ ಅದರ ಕಡೆಯ ಅರ್ಧದ ಭಾಗದವರೆಗೆ ಪಾಲಿಥಿನ್ ತಂತಿ ಇರುವುದರಿಂದ ಯಾವುದೇ ಕಾರಣಕ್ಕೂ ಗಾಳವು ಕೈ ತಪ್ಪಿ ಹೋಗುವ ಸಂಭವ ಕಡಿಮೆ ಇರುತ್ತದೆ. ಪಾಲಿಥಿನ್ ತಂತಿಗೆ ಸಿಕ್ಕಿಸುವ ಗಾಳದ ಗಾತ್ರ ಸಣ್ಣದಾಗಿರುತ್ತದೆ. ಮೊರಂಟೆ ಗಾಳದ ಹಾಗೆ ಇದಕ್ಕೆ ಸೀಸವನ್ನೂ ಜೋಡಿಸಲಾಗುವುದಿಲ್ಲ. ಗಾಳಕ್ಕೆ ಎರೆಹುಳವನ್ನೂ ಗಾಳದ ಗಾತ್ರದಷ್ಟು ಮಾತ್ರ ಪೋಣಿಸುತ್ತಾರೆ. ಎರೆಹುಳವಿರುವ ಗಾಳಕ್ಕೆ ಎಂಜಲನ್ನೂ ಉಗಿದು ಹರಿಯುವ ನೀರಿಗೆ ಮೇಲಿನಿಂದ ಬೀಸಿ ಗಾಳವನ್ನು ಎಸೆಯುತ್ತಾರೆ. ಹರಿಯುವ ನೀರಿನಲ್ಲಿ ಗಾಳವನ್ನೂ ಹರಿಯಲು ಬಿಡುತ್ತಾರೆ. ಬೈನೆ ಮರದ ಗೆಲ್ಲು ಎಷ್ಟು ಉದ್ದ ಇದೆಯೋ ಅಷ್ಟು ಉದ್ದ ಕೆಳ ಮುಖವಾಗಿ ಹರಿಯಬಿಡುತ್ತಾರೆ. ವೇಗವಾಗಿ ಎಳೆದು ಪುನಃ ನೀರು ಹರಿಯುವ ಮೇಲ್ಭಾಗಕ್ಕೆ ಎಸೆಯುತ್ತಾರೆ. ಸೀಸವಿರದೆ ಗಾಳ ಮಾತ್ರ ಇರುವುದರಿಂದ ಎರೆಹುಳವಿರುವ ಗಾಳವು ನೀರಿನಲ್ಲಿ ತೇಲಿಕೊಂಡು ಹೋಗುತ್ತವೆ. ಹರಿಯುವ ನೀರಿನ ಮಧ್ಯಭಾಗದಲ್ಲಿ ಪಾಚೊಳ್ತಿ ಮೀನುಗಳು ಇರುವುದರಿಂದ ತಕ್ಷಣ ಗಾಳವನ್ನು ಕಚ್ಚಿಕೊಂಡು ಓಡುತ್ತವೆ. ಈ ಸಂದರ್ಭದಲ್ಲಿ ಮೀನುಗಳು ಗಾಳದಲ್ಲಿ ಸಿಕ್ಕಿಕೊಳ್ಳುತ್ತವೆ. ಒಮ್ಮೆ ಮೀನು ಸಿಕ್ಕಿದ ತಕ್ಷಣ ಮತ್ತೆ ಎರೆಹುಳವನ್ನು ಗಾಳಕ್ಕೆ ಸಿಕ್ಕಿಸಿ ಪುನಃ ಎಂಜಲು ಉಗಿದು ನೀರಿಗೆ ಗಾಳವನ್ನು ಬೈನೆ ಮರ ಗೆಲ್ಲಿನ ಮೂಲಕ ಗಾಳವನ್ನು ಎಸೆಯುತ್ತಾರೆ. ಈ ರೀತಿಯ ಮೀನು ಹಿಡಿಯುವಿಕೆ ಕಾರ್ಯವನ್ನು ನದಿಗಳು, ದೊಡ್ಡ ದೊಡ್ಡ ತೋಡುಗಳಲ್ಲಿ ಮಾತ್ರ ಮಾಡಲು ಸಾಧ್ಯವಿರುತ್ತದೆ. ಯಾಕೆಂದರೆ ಅಲ್ಲಿ ವೇಗವಾಗಿ ಹರಿಯುವ ನೀರಿನ ಸೆಳೆತವಿರುತ್ತದೆ. ಕೆಲವೊಮ್ಮೆ ಹೆಚ್ಚು ವೇಗವಾಗಿ ಎಳೆಯುವುದರಿಂದ ಗಾಳದಿಂದ

ಮೀನು ಕಳಚಿ ಹೋಗುವ ಸಂಭವವಿರುತ್ತದೆ. ಯಾಕೆಂದರೆ ಇದರ ಬಾಯಿ ಸುತ್ತ ಮೃದುವಾದ ರಚನೆಯಿರುತ್ತದೆ.

**2.3 ಮಲೆಜ್ಜಿ, ಮರಿಮೀನು/ ಹಾವು ಮೀನು ಗಾಳ:**

ಮರಿಮೀನು ಗಾಳದಲ್ಲಿ ನಾಲ್ಕು ಉಪವಿಭಾಗಗಳಿವೆ.

1. ಗಾಳ ಕಟ್ಟುವುದು
2. ಗಾಳ ಕೊಡುವುದು(ಬಿಲಕ್ಕೆ ಕೊಡುವುದು)
3. ಬೇಪು ಮಾಡುವುದು
4. ಕೊಕ್ಕೆ ಗಾಳ ಇತ್ಯಾದಿ ವಿಭಾಗಗಳಿವೆ.

ಪ್ರತಿಯೊಂದು ವಿಧಾನಕ್ಕೂ ಅದರದ್ದೇ ಆದ ವ್ಯತ್ಯಾಸಗಳಿವೆ. ಮೇಲೆ ಉಲ್ಲೇಖಿಸಿದ ಹಾವು ಮೀನು ಬೇಟೆಯ ಪ್ರಕ್ರಿಯೆಯಲ್ಲಿ ನಾಲ್ಕು ವಿಭಾಗಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಈ ಮುಂದೆ ವಿವರಿಸಲಾಗಿದೆ.

**ಮಲೆಜ್ಜಿ/ಮರಿಮೀನು/ಹಾವು ಮೀನು**

ಹಾವು ಮೀನಿಗೆ ತುಳುಭಾಷೆಯ ಪದವನ್ನೇ ಬಳಸಲಾಗಿದೆ. ಮಲೆಜ್ಜಿ ಮತ್ತು ಮರಿಮೀನು ಎಂಬಲ್ಲಿ ಮರಿ ಅಂದರೆ ತುಳುಭಾಷೆಯಲ್ಲಿ ಹಾವು ಎಂದರ್ಥ. ಹಾಗಾಗಿ ಮರಿಮೀನ್ ಅನ್ನುವ ಪದ ಚಾಲ್ತಿಯಲ್ಲಿದೆ. ಮಲೆಜ್ಜಿ ಮತ್ತು ಮರಿಮೀನು ಅಥವಾ ಹಾವು ಮೀನಿನ ದೇಹ ರಚನೆಯಲ್ಲಿ ವ್ಯತ್ಯಾಸವಿದೆ. ಮಲೆಜ್ಜಿ ಮೀನು ಗಿಡ್ಡ ಮತ್ತು ಹೆಚ್ಚು ದಪ್ಪಗಾಗುವುದು. ಅದೇ ರೀತಿ ಹಾವು ಮೀನು ಉದ್ದ ಜಾಸ್ತಿಯಾಗುವುದು ಮತ್ತು ಉದ್ದಕ್ಕೆ ಸರಿಯಾಗಿ ದಪ್ಪವಾಗಿ ಬೆಳೆಯುವುದು. ಎರಡೂ ಜಾತಿಯ ಮೀನಿನ ಮೈಯಲ್ಲಿ ಹಾವಿನ ಹಾಗೆ ಹುರುಪೆಗಳಿರುವುದಿಲ್ಲ. ಬದಲಾಗಿ ನಯವಾಗಿರುತ್ತದೆ. ನಯವಾದ ಕಲ್ಲಿಗೆ ಪಾಚಿ ಹಿಡಿದಾಗ ಯಾವ ರೀತಿ ಜಾರುತ್ತದೋ ಅದೇ ರೀತಿ ಜಾರು ಮೈ ಹೊಂದಿದ್ದು ಮೈಯು ಒಂದು ರೀತಿಯ ಲೋಳೆ ದ್ರವವನ್ನು ಹೊರ ಸೂಸುವ ಹಾಗೆ ಕಂಡುಬರುತ್ತದೆ. ಮಲೆಜ್ಜಿ ಮತ್ತು ಮರಿಮೀನಿನ ಬಣ್ಣ ಕಡುಹಸಿರು, ಅಂದರೆ ಪಾಚಿಯ ಬಣ್ಣ ಮತ್ತು ಮೈಯಲ್ಲಿ ಕಡು ಹಸಿರು ಬಣ್ಣದ ಚುಕ್ಕೆಗಳಿರುತ್ತವೆ. ಆದರೆ ಮೀಸೆ ಇರುವುದಿಲ್ಲ. ಅಗಲಬಾಯಿ ಹೊಂದಿ ಬಾಯಿಯ ಸುತ್ತ ಚಿಕ್ಕ ಚಿಕ್ಕ ಮುಳ್ಳಿನ ರೀತಿಯಲ್ಲಿ ಹಲ್ಲುಗಳಿವೆ. ಹಲ್ಲುಗಳು ಎಷ್ಟು ತೀಕ್ಷ್ಣವಾಗಿವೆಯೆಂದರೆ ಹೆಚ್ಚು ಹೊತ್ತು ಮರಿಮೀನು/ಮಲೊಜ್ಜಿ ಮೀನು ಸಿಕ್ಕಿ ಹಾಕಿಕೊಂಡಿದ್ದರೆ ಪಾಲಿಥಿನ್ ತಂತಿಯನ್ನು ಜಗಿದು ತುಂಡುಮಾಡುವಷ್ಟು ಬಲಿಷ್ಠವಾಗಿದೆ.

ಇದರಲ್ಲಿ ಮರಿ/ಹಾವು ಮೀನು ಹೆಚ್ಚು ಬೆಳವಣಿಗೆ ಹೊಂದಿ ನೀರಿನ ಆಶ್ರಯವನ್ನು ಬಿಟ್ಟು ಗುಡ್ಡೆಯಲ್ಲಿ ಬದುಕುವ ಸಂದರ್ಭಗಳೂ ಇವೆಯಂತೆ. ನಾನು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭ ಹಿರಿಯರೊಬ್ಬರು ಮಾಹಿತಿ ನೀಡಿದ ಪ್ರಕಾರ ಅವರ ಹಿರಿಯರು ಹೇಳಿದ ಮಾತನ್ನು ಉಲ್ಲೇಖಿಸಿ

ಹೇಳಿದ್ದರು. ಅದೇನೆಂದರೆ ಒಂದು ಹಾವುಮೀನು ದೊಡ್ಡದಾಗಿ ಬೆಳೆದು ಅವರ ಕೋಳಿ ಗೂಡಿನೊಳಗೆ ನುಗ್ಗಿ ಬಂದು ಕೋಳಿಗಳನ್ನು ತಿನ್ನಲೆತ್ನಿಸಿದಾಗ ಕೋಳಿ ಗೂಡಿಗೆ ಹಾಕಿದಂತಹ ಬೂದಿ ಹಾವು ಮೀನಿನ ಮೇಲೆ ಮೆತ್ತಿಕೊಂಡು ಹೊರಹೋಗಲಾರದೆ ಕೋಳಿಗೂಡಿನಲ್ಲಿಯೇ ಹೊರಳಾಡಿ ಸಿಕ್ಕಿಹಾಕಿಕೊಂಡಿರುವ ವಿಚಾರವನ್ನು ಉಲ್ಲೇಖಿಸಿದ್ದರು. ಆದರೆ ಮಲೆಜ್ಜಿ ಮೀನು ಈ ರೀತಿ ಗುಡ್ಡ ಪ್ರದೇಶದಲ್ಲಿ ಬದುಕಿದಂತಹ ಉಲ್ಲೇಖಗಳು ಇಲ್ಲಿಯವರೆಗೆ ಸಿಕ್ಕಿಲ್ಲ. ಹಾಗಾಗಿ ಮಲೆಜ್ಜಿ ಮತ್ತು ಹಾವು ಮೀನು ವ್ಯತ್ಯಾಸವನ್ನು ತಿಳಿಯಬಹುದು.

**ಸ್ವಚ್ಚಗೊಳಿಸುವ/ಪದಾರ್ಥ ಮಾಡುವ ವಿಧಾನ**

**ಒಂದನೇ ವಿಧಾನ:**

ಮಲೆಜ್ಜಿ/ಹಾವು ಮೀನನ್ನು ಸ್ವಚ್ಚಗೊಳಿಸುವ ಸಂದರ್ಭದಲ್ಲಿ ಎರಡು ವಿಧಾನವನ್ನು ಅನುಸರಿಸುತ್ತಾರೆ. ಒಂದು ಹಾವು/ಮಲೆಜ್ಜಿ ಮೀನಿನ ಚರ್ಮವನ್ನು ಸುಲಿದು ಕರುಳನ್ನೂ ತೆಗೆದು ಸ್ವಚ್ಚಗೊಳಿಸುವುದು. ಅರ್ಧ ಇಂಚಿನಷ್ಟು ಗಾತ್ರಕ್ಕೆ ತುಂಡು ಮಾಡುವುದು.

**ಮತ್ತೊಂದು ವಿಧಾನ:**

ಮೀನನ್ನು ಬೂದಿ ಹಾಕಿ ಒರಟು ಕಲ್ಲಿನ ಮೇಲೆ ಉಜ್ಜುವುದು ಮೀನಿನ ಮೈಮೇಲಿರುವ ಅಂಟು ಪದಾರ್ಥ ಹೋಗುವಷ್ಟು ಉಜ್ಜಿ ಅನಂತರ ಮೇಲೆ ಉಲ್ಲೇಖಿಸಿದ ಹಾಗೆ ತುಂಡರಿಸಿ ಮೊದಲು ಉಪ್ಪು ಹಾಕಿ ಬೇಯಿಸಿ ಬೆಂದ ನಂತರ ತೆಂಗಿನ ಕಾಯಿಯನ್ನು ಹೊರತುಪಡಿಸಿ ಉಳಿದ ಎಲ್ಲಾ ಸಾಂಬಾರ ಪದಾರ್ಥಗಳನ್ನು ಸೇರಿಸಿ ರುಚಿಗೆ ತಕ್ಕಷ್ಟು ಬೆರೆಸಿ ಸಾಂಬಾರು ತಯಾರಿಸುವುದು.

**ಉಪಯೋಗ:** ಗರ್ಭಿಣಿ ಸ್ತ್ರೀಯರಿಗೆ, ಚಿಕ್ಕ ಮಕ್ಕಳಿಗೆ ಇದರ ಸಾಂಬಾರು ಹೆಚ್ಚು ಆರೋಗ್ಯಯುಕ್ತವಾದ ಖಾದ್ಯವಾಗಿದೆ.

**ಬೇಟೆಗಾರಿಕೆ ವಿಧಾನ**

**2.3.1 ಗಾಳ ಕಟ್ಟುವುದು**

ಗಾಳ ಕಟ್ಟುವ ವಿಧಾನವನ್ನು ಸಾಮಾನ್ಯವಾಗಿ ಮಳೆಗಾಲ ಕಡಿಮೆಯಾಗಿ ಚಳಿಗಾಲ ಆರಂಭವಾಗುವ ಸಂದರ್ಭದಲ್ಲಿ ಅನುಸರಿಸುತ್ತಾರೆ. ಸಪ್ಟೆಂಬರ್, ಅಕ್ಟೋಬರ್ ಹಾಗೂ ನವೆಂಬರ್ ತಿಂಗಳಿನಲ್ಲಿ ಹೆಚ್ಚಾಗಿ ಈ ವಿಧಾನದಲ್ಲಿ ಮೀನು ಬೇಟೆಯಾಡುತ್ತಾರೆ. ರಾತ್ರಿ ಹೊತ್ತಿನಲ್ಲಿ ಗಾಳ ಕಟ್ಟುತ್ತಾರೆ. ಬೆಳದಿಂಗಳು ಹೆಚ್ಚಿರುವಾಗ ಗಾಳವನ್ನು ಕಟ್ಟುವುದಿಲ್ಲ. ಮೀನುಗಳು ಅಪಾಯವನ್ನು ಅರಿಯುತ್ತವೆ.

ಗಾತ್ರದಲ್ಲಿ ದೊಡ್ಡದಾದ ಗಾಳಕ್ಕೆ ಕಪ್ಪೆಯನ್ನು, ನದಿಮೀನು, ಮೊರಂಟೆ ಮೀನನ್ನು ಗಾಳದ ಆಕಾರಕ್ಕೆ ಹೊಂದಾಣಿಕೆಯಾಗುವಷ್ಟು ಪೋಣಿಸುತ್ತಾರೆ. ಸಾಧಾರಣವಾಗಿ ಒಂದು ಮೀಟರ್‌ನಷ್ಟು ಉದ್ದದ

ಪ್ಲಾಸ್ಟಿಕ್ ಹಗ್ಗಕ್ಕೆ ಗಾಳವನ್ನು ಕಟ್ಟುತ್ತಾರೆ. ಅದಕ್ಕೆ ಮೇಲೆ ಉಲ್ಲೇಖಿಸಿದ ಹಾಗೆ ಮೀನನ್ನು ಪೋಣಿಸುತ್ತಾರೆ. ಸಾಮಾನ್ಯವಾಗಿ ನದಿಯಲ್ಲಿ ಮಾತ್ರ ಈ ರೀತಿಯ ಮೀನು ಬೇಟೆ ಸಾಧ್ಯ. ಯಾಕೆಂದರೆ ಹಾವು ಮೀನು ಮಳೆಗಾಲ ಕಳೆದ ನಂತರ ಅವುಗಳು ರಭಸವಾಗಿ ಹರಿಯುವ ಮತ್ತು ನೀರು ನಿಂತ ನದಿ ಪಾತ್ರಗಳಲ್ಲಿ ವಾಸಿಸುತ್ತವೆ.

ಗಾಳವನ್ನು ನದಿಯ ದಡದಲ್ಲಿರುವ ನೀರಿಗೆ ತಾಗಿಕೊಂಡಿರುವ ಬಡ/ಗಿಡಗಳಿಗೆ ಅದು ಕೂಡ ನೀರಿಗೆ ಬಗ್ಗಿರುವ ಗಿಡಗಳಿಗೆ ನೇತು ಹಾಕುತ್ತಾರೆ. ಅಥವಾ ಒಂದೂವರೆ ಮೀಟರ್‌ನಷ್ಟು ಉದ್ದದ ಹಸಿ ಕೋಲಿನ ಮೇಲೆ ಸಾಧಾರಣ ಗಾತ್ರದ ಕಲ್ಲುಗಳನ್ನು ಇಡುತ್ತಾರೆ. ಈ ಕೋಲಿನ ತುದಿಗೆ ಗಾಳವನ್ನು ಕಟ್ಟುತ್ತಾರೆ. ಗಾಳವು ನೀರಿನ ಆಳಕ್ಕೆ ಅನುಗುಣವಾಗಿ ಕಟ್ಟುತ್ತಾ ಹೋಗುತ್ತಾರೆ. ಸಾಧಾರಣವಾಗಿ ಒಂದು ಅಡಿ ಅಳದಷ್ಟು ಗಾಳವು ಮುಳುಗುವ ಹಾಗೆ ಕಟ್ಟುತ್ತಾರೆ. ಇಲ್ಲಿ ಈ ಗಾಳಕ್ಕೆ ಸೀಸ ಇರುವುದಿಲ್ಲ. ಗಾಳಕ್ಕೆ ಸಿಕ್ಕಿಸಿರುವ ಆಹಾರದ/ಮೀನಿನ ಭಾರಕ್ಕೆ ಅದು ನೀರಿನ ಆಳದಲ್ಲಿ ನಿಲ್ಲುತ್ತದೆ. ಹೆಚ್ಚು ಆಳವಿಲ್ಲದ ನೀರಿನಲ್ಲಿ ಹಾವು ಮೀನುಗಳು ಗಾಳದಲ್ಲಿ ಸಿಕ್ಕಿ ಹಾಕಿಕೊಂಡಿದ್ದರೆ ಅದರ ಬಾಲವು ಅಡಿಗಲ್ಲಿಗೆ ಅಥವಾ ನೀರಿನಲ್ಲಿರುವ ಹುಲ್ಲಿಗೆ ತಾಗಿದರೆ ಹಾವು ಮೀನುಗಳ ಕಟ್ಟಿದ ಗಾಳವನ್ನು ತುಂಡರಿಸುವ ಸಾಧ್ಯತೆಗಳಿವೆ. ಹಾಗಾಗಿ ಗಾಳ ಕಟ್ಟುವ ಜಾಗಗಳಲ್ಲಿ ಸಿಕ್ಕಿಹಾಕಿಕೊಂಡಿರುವ ಮೀನುಗಳಿಗೆ ತಳದಲ್ಲಿ ಯಾವುದೋ ಆಧಾರವಾಗಿ ಸಿಗದ ಹಾಗೆ ಎಚ್ಚರವಹಿಸುವುದು ಅತೀ ಅವಶ್ಯಕ.

### 2.3.2 ಗಾಳ ಕೊಡುವುದು

ಗಾಳ ಕೊಡುವ ವಿಧಾನವನ್ನು ಸಾಮಾನ್ಯವಾಗಿ ಮಳೆಗಾಲ ಕಳೆದ ನಂತರ ಅನುಸರಿಸುತ್ತಾರೆ. ಈ ವಿಧಾನವನ್ನು ನದಿಗಳಲ್ಲಿ ಮತ್ತು ದೊಡ್ಡದಾಗಿರುವ ತೋಡುಗಳಲ್ಲಿ ಇದನ್ನು ಮಾಡುತ್ತಾರೆ. ಬಿದಿರಿನ ತೆಳ್ಳಗಿನ ಗೆಲ್ಲನ್ನು ಚೆನ್ನಾಗಿ ಅದರ ಉಪಪಿಳ್ಳೆಗಳನ್ನು ಕಡಿದು ನಯಗೊಳಿಸಬೇಕು. ಅದರ/ಗೆಲ್ಲಿನ ತುದಿಯಲ್ಲಿ ಸಣ್ಣದಾಗಿ ಅರ್ಧ ಇಂಚಿನಷ್ಟು ಸೀಳಿ ಅದಕ್ಕೆ ಕಪ್ಪು ನೂಲನ್ನು ತುದಿಯಲ್ಲಿ ಸ್ವಲ್ಪ ಎಡೆ ಬಿಟ್ಟು ಸುತ್ತಬೇಕು. ಅಂದರೆ ಗಾಳದೊಂದಿಗೆ ಪಾಲಿಥಿನ್ ತಂತಿಯನ್ನು ಸಿಕ್ಕಿಸಲು ತುದಿಯ ಮಧ್ಯದಲ್ಲಿ ಸ್ಥಳಾವಕಾಶವಿರುವ ಹಾಗೆ ಮಾಡಬೇಕು. ಸೀಸವಿಲ್ಲದ ಗಾಳಕ್ಕೆ ಮೀನು, ಏಡಿಯ ತುಂಡು, ಕೋಳಿಯ ಕರುಳು ಇವುಗಳನ್ನು ಪೋಣಿಸಬೇಕು. ಪಾಲಿಥಿನ್ ತಂತಿಯನ್ನು ಮರದ ತುಂಡಿಗೆ ಅಂದರೆ ಚಕ್ರಾಕಾರ ಮತ್ತು ಶಿವನ ಡಮರುಗ ಚಿಹ್ನೆಯನ್ನು ಹೋಲುವ ಮರದ ತುಂಡಿಗೆ ಸುತ್ತುತ್ತಾರೆ. ಸುಮಾರು ಒಂದೂವರೆ ಮೀಟರ್ ಉದ್ದ ಬಿದಿರಿನ ಗೆಲ್ಲನ್ನು ಇದಕ್ಕೆ ಬಳಸಿಕೊಳ್ಳುತ್ತಾರೆ. ನೀರಿನ ರಭಸ ಕಡಿಮೆ ಇರುವ ಜಾಗದಲ್ಲಿ ನೀರಿನಲ್ಲಿ ಎತ್ತರವಾಗಿರುವ ಕಲ್ಲು, ಕಲ್ಲಿನ ಬಿಲಕ್ಕೆ ಆಹಾರ ಸಿಕ್ಕಿಸಿರುವ/ಪೋಣಿಸಿರುವ ಗಾಳವನ್ನು ಕೊಡಬೇಕು. ಕಲ್ಲಿನಲ್ಲಿ ಅಥವಾ ನೀರಿನಲ್ಲಿರುವ ಬಿಲದಲ್ಲಿ ಹಾವು ಮೀನು ಇದೆ ಎಂದಾದರೆ ತಕ್ಷಣ ವೇಗವಾಗಿ ಗಾಳದಲ್ಲಿರುವ ಆಹಾರಕ್ಕೆ ಬಾಯಿ ಹಾಕುತ್ತವೆ. ಈ ಸಂದರ್ಭದಲ್ಲಿ ಯಾವುದೇ ಪ್ರತಿಕ್ರಿಯೆ ತೋರದೆ ಸುಮ್ಮನಿರಬೇಕು. ವೇಗವಾಗಿ ಹಾವು ಮೀನು ಕಟ್ಟಿದಾಗ ಬಿದಿರಿನ ಗೆಲ್ಲಿನ

ತುದಿಯಲ್ಲಿರುವ ಗಾಳವನ್ನು ಒಳಗೊಂಡಿರುವ ಪಾಲಿಥಿನ್ ಸರಿಗೆಯು ಬೇರ್ಪಟ್ಟ ಮುಲೆಚ್ಚಿ/ಹಾವು ಮೀನು ನುಂಗಿಕೊಳ್ಳುವುದಕ್ಕೆ ಸಡಿಲ ಮಾಡುತ್ತಾರೆ. ಮತ್ತು ಬಿದಿರಿನ ಗೆಲನ್ನು ನಿಧಾನವಾಗಿ ತೆಗೆಯುತ್ತಾರೆ. ನಂತರ ಸ್ವಲ್ಪ ಹೊತ್ತು ಕಾದು ನಂತರ ಪಾಲಿಥಿನ್ ತಂತಿಯನ್ನು (Fishing Line) ವೇಗವಾಗಿ ಒಮ್ಮೆಲೆ ಬಲವಾಗಿ ಎಳೆಯುತ್ತಾರೆ. ಈ ಸಂದರ್ಭದಲ್ಲಿ ಗಾಳವು ತಕ್ಷಣ ಮೀನಿಗೆ ಚುಚ್ಚಿಕೊಳ್ಳುತ್ತದೆ. ಒಂದು ನಿಮಿಷ ಕಾದು ಮೀನು ಗಾಳದಲ್ಲಿ ಸಿಕ್ಕಿಹಾಕಿಕೊಂಡಿದೆ ಅನ್ನುವುದನ್ನು ಖಾತ್ರಿ ಮಾಡಿಕೊಂಡು ಪಾಲಿಥಿನ್ ತಂತಿಯನ್ನು ತಕ್ಷಣ ವೇಗವಾಗಿ ಹಿಡಿದೆಳೆಯುತ್ತಾರೆ ಆಗ ಬಿಲದಲ್ಲಿರುವ ಮೀನು ನೋವಿನಿಂದಾಗಿ ಹೊರಗೆ ಬರುತ್ತದೆ. ಹೊರಗೆ ಬಂದ ತಕ್ಷಣ ಆದಷ್ಟು(ಉಸುಕು) ಮರಳಿರುವ ಜಾಗಕ್ಕೆ ಎಳೆದೊಯ್ದು ಮೇಲಕ್ಕೆ ಹಾಕುತ್ತಾರೆ. ಈ ಹಾವು ಮೀನು ಕೋಲಿನಿಂದ ಹೊಡೆದರೂ ತಕ್ಷಣಕ್ಕೆ ಸಾಯದಿರುವುದರಿಂದ ಕಲ್ಲಿನಲ್ಲಿ ವೇಗವಾಗಿ ಹರಿದುಕೊಂಡು ಹೋಗಿ ನೀರಿಗೆ ಜಿಗಿಯುವ ಸಂಭವವಿರುತ್ತದೆ. ಹಾಗಾಗಿ ಮರಳಿನ ಮೇಲೆ ಗಾಳದಲ್ಲಿರುವ ಮೀನನ್ನು ಎಸೆಯುವುದರಿಂದ ಅದು ವೇಗವಾಗಿ ಹರಿದುಕೊಂಡು ಹೋಗಲು ಅಸಾಧ್ಯವಾಗುತ್ತದೆ. ಹಾವು ಮೀನಿನ ಮೇಲೆಲ್ಲ ಅಂಟುದ್ರವ ಇರುವುದರಿಂದ ಮರಳು ಅದರ ಮೈಯಲ್ಲೆಲ್ಲಾ ಮೆತ್ತಿಕೊಂಡು ಹರಿದುಕೊಂಡು ಹೋಗಲು ಅಸಾಧ್ಯವಾಗುತ್ತದೆ. ಈ ಸಂದರ್ಭದಲ್ಲಿ ಕೋಲಿನಿಂದ ಅಥವಾ ಕತ್ತಿಯಿಂದ ಹೊಡೆದು ಸಾಯಿಸುತ್ತಾರೆ.

### 2.3.3 ಬೇಪು ಹಾಕುವುದು/ಮಾಡುವುದು

ಇದು ಗಾಳ ಕಟ್ಟುವ ವಿಧಾನದ ಉಪಪ್ರಭೇದ. ಈ ವಿಧಾನದಲ್ಲಿ ಗಾಳ ಕಟ್ಟುವ ದೊಡ್ಡ ಗಾತ್ರದ ಗಾಳಗಳಿಗೆ ಅಷ್ಟೇ ಗಾತ್ರದ ಮೀನನ್ನು ಪೋಣಿಸುತ್ತಾರೆ. ಸುಮಾರು ಆರರಿಂದ ಹತ್ತು ಮೀಟರ್ ಉದ್ದದ ದಪ್ಪ ಗಾತ್ರದ ಕಬ್ಬಿಣದ ತಂತಿ ಅಥವಾ ತೆಂಗಿನ ನಾರಿನಿಂದ ತಯಾರಿಸಿದ ದಪ್ಪವಾದ ಹಗ್ಗಕ್ಕೆ ಅರ್ಧ ಮೀಟರ್‌ನಷ್ಟು ಅಗಲಕ್ಕೆ ಗಾಳಗಳನ್ನು ಕಟ್ಟುತ್ತಾರೆ. ಸಾಧಾರಣವಾಗಿ 10 ಗಾಳಗಳಾದರೂ ಅದರಲ್ಲಿರುತ್ತದೆ. ಈ ರೀತಿ ಜೋಡಿಸಿದಂತಹ ಗಾಳದ ತಂತಿಯನ್ನು ಸಾಧಾರಣ ಆಳವಿರುವ ನದಿನೀರಿನಲ್ಲಿ ಎಸೆಯುತ್ತಾರೆ. ರಾತ್ರಿ ಹೊತ್ತಿನಲ್ಲಿ ಈ ವಿಧಾನವನ್ನೂ ಅಳವಡಿಸಿಕೊಳ್ಳುತ್ತಾರೆ. ಇಲ್ಲಿ ನೀರಿನ ಅಳದಲ್ಲಿ ಸಂಚರಿಸುವ ಹಾವು ಮೀನುಗಳು ಈ ಗಾಳದಲ್ಲಿ ಸಿಕ್ಕಿ ಹಾಕಿಕೊಳ್ಳುತ್ತದೆ. ಸಾಮಾನ್ಯವಾಗಿ 2 ಮೀನುಗಳಾದರೂ ಸಿಗುತ್ತದೆ. ಕಾರಣವೇನೆಂದರೆ ಇಡೀ ಕಬ್ಬಿಣದ ತಂತಿ ಅಥವಾ ಹಗ್ಗದಲ್ಲಿ ಸಿಕ್ಕಿ ಹಾಕಿಕೊಂಡಿರುವ ಮೀನುಗಳು ಒದ್ದಾಡುತ್ತಿರುವುದರಿಂದ ಉಳಿದ ಮೀನುಗಳು ಹೆದರಿ ಓಡುವ ಸಂದರ್ಭಗಳು ಹೆಚ್ಚಾಗಿರುತ್ತದೆ. ಅಷ್ಟು ಮಾತ್ರವಲ್ಲ ಈ ವಿಧಾನದಲ್ಲಿ ಮೀನುಗಳು ಗಾಳ ಸಮೇತ ಬಿಲವನ್ನು ಸೇರಿಕೊಳ್ಳುವ ಸಂಭವ ಹೆಚ್ಚಾಗಿರುತ್ತದೆ. ಇದಕ್ಕಾಗಿ ಹೆಚ್ಚು ಅಳವನ್ನು ಹೊಂದಿರುವ ನೀರಿನ ಗುಂಡಿಯಲ್ಲಿ ಈ ವಿಧಾನವನ್ನು ಅಳವಡಿಸಿಕೊಳ್ಳುವುದಿಲ್ಲ. ಇದರಲ್ಲಿ ತಂತಿಯ ತುದಿಯನ್ನು ನದಿಯ ದಡಕ್ಕೆ ಕಟ್ಟುತ್ತಾರೆ. ಹಾವು ಮೀನುಗಳು ಎಳೆದುಕೊಂಡು ಹೋಗುತ್ತವೆ. ಅನ್ನುವ ಮುಂಜಾಗ್ರತೆಯಿಂದ ಈ ರೀತಿ ಕಟ್ಟುತ್ತಾರೆ. ಮಳೆಗಾಲ ಕಳೆದ ಬಳಿಕ ರಾತ್ರಿ ಹೊತ್ತಿನಲ್ಲಿ ಬೇಪು ಮಾಡಿ ಕಬ್ಬಿಣ ತಂತಿಯ

ಒಂದು ತುದಿಗೆ ಸಾಧಾರಣ ಗಾತ್ರದ ಕಲ್ಲನ್ನು ಕಟ್ಟುತ್ತಾರೆ. ತಂತಿಯನ್ನು ಬೀಸಿ ನದಿನೀರಿಗೆ ಎಸೆಯಲು ಇದು ಸಹಕಾರಿಯಾಗುತ್ತದೆ. ಬೆಳಗ್ಗೆ ಹೋಗಿ ನದಿದಡದಲ್ಲಿರುವ ತಂತಿಯ ಒಂದು ತುದಿಯಿಂದ ಎಳೆಯುತ್ತಾರೆ. ದೊಡ್ಡ ಮೀನು ಇದ್ದರೆ ಅದು ನೀರಿನಲ್ಲಿರುವ ಕಲ್ಲಿನ ಅಡಿಗೋ ಅಥವಾ ಬಿಲದಲ್ಲಿ ಸೇರಿಕೊಂಡಿದ್ದರೆ ನೀರಿಗೆ ಇಳಿದು ಮೀನನ್ನು ತೆಗೆಯುವ ಸಂಭವಗಳು ಇರುತ್ತವೆ.

### 2.3.4 ಕೊಕ್ಕೆ ಗಾಳ:

ಮಲೆಜ್ಜಿ/ಹಾವು ಮೀನುಗಳನ್ನು ಹಿಡಿಯುವ ಇನ್ನೊಂದು ವಿಧಾನವೆಂದರೆ ಕೊಕ್ಕೆ ಗಾಳ ವಿಧಾನ. ಸಾಮಾನ್ಯವಾಗಿ ಈ ವಿಧಾನದಲ್ಲಿ ಹಾವು ಮೀನಿನ ಜೊತೆಗೆ ಸೇಡೆ/ತೇಡೆ (ಉದ್ದ ಮೀಸೆ ಪಾಚಿ ಬಣ್ಣ ಮತ್ತು ಬಾಳದ ಹತ್ತಿರ ಹಳದಿ  ಮತ್ತು ಕಪ್ಪು ಬಣ್ಣವಿರುತ್ತದೆ)  ಹೆಚ್ಚು ರುಚಿಯಾದ ಮೀನು ಸಣ್ಣ ಗಾತ್ರದಾಗಿದ್ದು ಹೆಚ್ಚೆಂದರೆ ಒಂದು ಕೆ.ಜಿ ತೂಕವಿರುವ ಮೀನನ್ನು ಈ ವಿಧಾನದಲ್ಲಿ ಹಿಡಿಯುತ್ತಾರೆ.

ಒಣ ಅಡಿಕೆ ಮರವನ್ನು ತೋರು ಬೆರಳಿನಷ್ಟು ಗಾತ್ರಕ್ಕೆ ಕಬ್ಬಿಣದ ಸರಳಿನಷ್ಟು ಆಕಾರದಲ್ಲಿ ಸಿದ್ಧಗೊಳಿಸುತ್ತಾರೆ. ಇದು ಸುಮಾರು ಒಂದೂವರೆ ಮೀಟರ್‌ನಷ್ಟು ಉದ್ದವಿರುತ್ತದೆ. ನೀರಿನ ಅಡಿಯಲ್ಲಿ ಮುಳುಗಿ ಕಲ್ಲಿನ ಎಡೆ, ಬಿಲದಲ್ಲಿ ಹಾವು ಮೀನುಗಳು, ತೇಡೆ/ಸೇಡೆ ಮೀನುಗಳು ಆಶ್ರಯವನ್ನು ಪಡೆದಿರುವ ಜಾಗಕ್ಕೆ ನುಣುಪಾಗಿಸಿದ ಅಡಿಕೆ ಮರದ ಕೋಲಿನ ಒಂದು ತುದಿಯಿಂದ ನಿಧಾನವಾಗಿ ಬಿಲದೊಳಗೆ ಹಾಕಿ ಸವರಬೇಕು/ಉಜ್ಜಬೇಕು. ಆಗ ಹಾವು ಮೀನುಗಳು/ತೇಡೆ ಮೀನುಗಳಿಗೆ ತಾಗಿದಾಗ ಅದರ ಮೈಯ್ಯಲ್ಲಿರುವ ಅಂಟು ದ್ರವ ಈ ಕೋಲಿಗೆ ತಾಗುತ್ತದೆ. ನೀರಿನಿಂದ ಮೇಲಕ್ಕೆ ತಂದು ಕೋಲನ್ನು ಪರೀಕ್ಷಿಸಬೇಕು. ಆಗ ಮೀನಿನ ಮೈ ಕೋಲಿಗೆ ತಾಗಿದ್ದರೆ ಕೋಲಿನಲ್ಲಿ ಅಂಟು ದ್ರವ ಮೆತ್ತಿಕೊಂಡಿರುತ್ತದೆ. ಆಗ ಮೀನು ಬಿಲದಲ್ಲಿ ಇದೆ ಅನ್ನುವುದು ಖಾತ್ರಿಯಾಗುತ್ತದೆ. ಆವಾಗ ಕೋಲಿನ ತುದಿಗೆ ಕೊಕ್ಕೆಗಾಳವನ್ನು ಒಳಗೊಂಡ ಉದ್ದವಾದ ಪಾಲಿಥೀನ್ ತಂತಿಯನ್ನು ಕಡೆಭಾಗದ ಕೋಲಿಗೆ ಬಲವಾಗಿ ಸುತ್ತುತ್ತಾರೆ. ಸುತ್ತಿ ಗಾಳವಿರುವ ಭಾಗವನ್ನು ಬಿಲದೊಳಗೆ ತುರುಕಿ ಸಾಮಾನ್ಯವಾಗಿ ಮೀನಿರುವ ಅಡಿ ಭಾಗಕ್ಕೆ ಹಾಕಿ ಬಲವಾಗಿ ಎಳೆಯುತ್ತಾರೆ. ಎಳೆದ ರಭಸಕ್ಕೆ ಗಾಳವು ಮೀನಿನ ಶರೀರದ ಯಾವುದೋ ಒಂದು ಭಾಗಕ್ಕೆ ಚುಚ್ಚಿಕೊಳ್ಳುತ್ತದೆ. ಗಾಳದ ಚುಚ್ಚಿದ ನೋವಿಗೆ ಕೆಲವು ಮೀನುಗಳು ಹೊರಗೆ ಓಡಿ  ಬರುತ್ತವೆ. ಈ ಸಂದರ್ಭದಲ್ಲಿ ಕೋಲಿಗೆ ಕಟ್ಟಿದ ಗಾಳದ ತಂತಿಯು ಬೇರ್ಪಡುತ್ತದೆ. ಮೀನು ಬರೀ ಪಾಲಿಥೀನ್ ತಂತಿಯಲ್ಲಿ ಸಿಕ್ಕಿ ಹಾಕಿಕೊಂಡಿರುವುದರಿಂದ ಮೀನನ್ನು ನೀರಿನ ಮೇಲೆ ಬಂದು ಎಳೆಯಲು ಅನುಕೂಲವಾಗುತ್ತದೆ. ಮತ್ತು ನದಿಯ ದಡಕ್ಕೆ ತಂದು ಮೀನು ಹಿಡಿಯಲು ಸಹಾಯಕವಾಗುತ್ತದೆ.

ಕೊಕ್ಕೆ ಗಾಳ ಮೀನು ಬೇಟೆಗಾರಿಕೆಯಲ್ಲಿ ಮೀನು ಹಿಡಿಯುವಾತ ಮುಳುಗು ತಜ್ಞನಾಗಬೇಕು. ದೊಡ್ಡ ದೊಡ್ಡ ಗುಂಡಿಗಳಲ್ಲಿ ನೀರು ಹೆಚ್ಚಿರುವುದರಿಂದ ಎರಡರಿಂದ ಮೂರು ನಿಮಿಷದಷ್ಟು ಕಾಲ ನೀರಿನ ಒಳಗೆ ಇರಬೇಕಾಗುತ್ತದೆ. ಕೆಲವು ಸಂದರ್ಭ ಕೋಲನ್ನು ಬಿಲದೊಳಗೆ ಕೊಂಡೊಯ್ಯುವಾಗಲೇ ಹಾವು ಮೀನುಗಳು ಭಯದಿಂದ ತಕ್ಷಣ ವೇಗವಾಗಿ ಹೊರಗೆ ಓಡಿಬರುವ ಸಂಭವ ಇರುತ್ತದೆ.

ಮಾತ್ರವಲ್ಲ ಗಾಳದಲ್ಲಿ ಸಿಕ್ಕಿಹಾಕಿಕೊಂಡಿರುವ ಮೀನುಗಳು ನೋವು ತಾಳಲಾರದೆ ಒಂದು ಸೆಕೆಂಡಿನ ಅವಧಿಯೊಳಗೆ ಓಡಿ ಹೊರಬರುವ ಸಂದರ್ಭಗಳು ಹೆಚ್ಚಿರುತ್ತದೆ. ಇಂಥ ಸಂದರ್ಭಗಳಲ್ಲಿ ತುಂಬಾ ಜಾಗರೂಕರಾಗಿರಬೇಕು. ಹಾವು ಮೀನುಗಳು ಓಡಿಬರುವ ವೇಗದಲ್ಲಿ ಮನುಷ್ಯನ ಎದೆಭಾಗ ಮತ್ತು ಮುಖದ ಭಾಗಕ್ಕೆ ತಾಗಿ ಆಕಸ್ಮಿಕ ದುರ್ಘಟನೆ ನಡೆಯುವಂತಹ ಸಂದರ್ಭಗಳು ಹೆಚ್ಚಿರುತ್ತದೆ. ಹಾಗಾಗಿ ತುಂಬಾ ಎಚ್ಚರದಿಂದಿರಬೇಕು. ಕಸ್ತೂರಿ ಮೃಗದ ಹಾಗೆ ತನ್ನ ಮೈಯ್ಯಲ್ಲಿರುವ ಸುಗಂಧ ದ್ರವ್ಯ ತನ್ನ ಜೀವಕ್ಕೆ ಹೇಗೆ ಕಂಟಕಪ್ರಾಯವಾಗುತ್ತದೋ, ಅದೇ ರೀತಿ ಹಾವು ಮೀನು ಮತ್ತು ತೇಡೆ ಮೀನಿನ ಮೈಯ್ಯಲ್ಲಿರುವ ಅಂಟು ದ್ರವವೇ ಅದಕ್ಕೆ ಮುಳುವಾಗುವುದನ್ನು ಗಮನಿಸಬಹುದು. ಹೀಗೆ ಮರಿಮೀನು ಬೇಟೆಗೆ ಗುಂಡಿಗೆ ಬೇಕಾಗುತ್ತದೆ.

## 2.4 ಪುರಿಯೋಲು/ನೊಲಿ ಮೀನುಗಾಳ:

ನೊಲಿಮೀನು, ನದಿ, ತೋಡುಗಳಲ್ಲಿ ಎತ್ತರ ಕಲ್ಲಿನ ಅಡಿಯಲ್ಲಿ, ಕಲ್ಲಿನ ಬಿಲದಲ್ಲಿ, ನದಿದಡದ ಬಿಲಗಳಲ್ಲಿ ನೀರಿನ ಅಡಿಯಲ್ಲಿರುವ ಅಡಿಕೆ ಮರದ ಟೊಳ್ಳಾಗಿರುವ ಮರಗಳಲ್ಲಿ ವಾಸ. ಸಾಮಾನ್ಯವಾಗಿ ಹಗಲು ಹೊತ್ತಿನಲ್ಲಿ ಇದು ಆಹಾರವನ್ನು ಅರಸುತ್ತಾ ಹೋಗುತ್ತದೆ. ಇದಕ್ಕೆ ಪ್ರಿಯವಾದ ಆಹಾರವೆಂದರೆ ಸಿಗಡಿ. ಈ ಜಾತಿಯ ಮೀನು ಹಾವು ಮೀನಿನ ಹಾಗೆ ಉದ್ದವಿರುತ್ತದೆ. ಆದರೆ ಹಾವು ಮೀನಿನ ಹಾಗೆ ಹೆಚ್ಚು ಉದ್ದ ಮತ್ತು ದಪ್ಪಗಾಗುವುದು ತೀರಾ ಕಡಿಮೆ. ಹೆಚ್ಚೆಂದರೆ ಎರಡರಿಂದ ಮೂರು ಕೆ.ಜಿಯಷ್ಟು ಭಾರವಿರುತ್ತದೆ. ಮೈ ಮೇಲೆಲ್ಲ ಚಿಕ್ಕ ಗಾತ್ರದ ಹುರುಪೆಗಳಿರುತ್ತದೆ. ಮುಖ ಉದ್ದವಾಗಿದ್ದು ಬೆನ್ನ ಮೇಲೆ ಚಿಕ್ಕ ಗರಗಸ ಗಾತ್ರದ ಹಾಗೆ ಮುಳ್ಳುಗಳಿರುತ್ತವೆ. ಗಾಳ ಅಥವಾ ಇತರ ವಿಧಾನಗಳಿಂದ ಸಿಕ್ಕಿದರೆ ತಕ್ಷಣ ಕೈಯಲ್ಲಿ ಹಿಡಿಯುವ ಪ್ರಯತ್ನ ಮಾಡಬಾರದು. ಇದು ಕೂಡ ಕಡು ಹಸಿರು ಪಾಚಿಬಣ್ಣವನ್ನು ಹೋಲುತ್ತದೆ.

**ಹಿಡಿಯುವ ವಿಧಾನ:**

ಈ ಜಾತಿಯ ಮೀನನ್ನು ಹಿಡಿಯಲು ಬಿದಿರಿನ ಚಿಕ್ಕ ಗಾತ್ರದ ಗೆಲ್ಲನ್ನು ಸುಮಾರು ಒಂದೂವರೆ ಮೀಟರ್‌ನಷ್ಟು ಉದ್ದಕ್ಕೆ ಕತ್ತರಿಸಬೇಕು. ಬಿದಿರಿನ ಗೆಲ್ಲಿನಲ್ಲಿರುವ ಪಿಳ್ಳೆಗಳನ್ನು ಕಡಿದು ಕೈಯಲ್ಲಿ ಹಿಡಿದುಕೊಳ್ಳುವಾಗ ಅದು ತಾಗದ ಹಾಗೆ ಶುಭ್ರಗೊಳಿಸಬೇಕು. ಕೋಲಿನ ತುದಿಭಾಗವನ್ನು ಅರ್ಧ ಇಂಚಿನಷ್ಟು ಗಾತ್ರಕ್ಕೆ ಸಿಗಿದು ಅದಕ್ಕೆ ಕಪ್ಪು ನೂಲನ್ನು ಸುತ್ತಿ ಮಧ್ಯಭಾಗದಲ್ಲಿ ಎಡೆ ಇರುವ ಹಾಗೆ ನೂಲನ್ನು ಸುತ್ತಬೇಕು. ನಂತರ ಚಿಕ್ಕ ಗಾತ್ರದ ಗಾಳವನ್ನು ಪಾಲಿಥೀನ್ ತಂತಿಗೆ ಜೋಡಿಸಬೇಕು. ಇಲ್ಲಿ ಬರೀ ಗಾಳ ಮಾತ್ರವಿರಬೇಕು ಸೀಸ ಬಳಸುವಂತಿಲ್ಲ. ಗಾಳಕ್ಕೆ ಸಿಗಡಿಯನ್ನು ಪೋಣಿಸಬೇಕು. ಪಾಲಿಥೀನ್ ತಂತಿ ಕಡಿಮೆ ಅಂದರೆ 3 ಮೀಟರ್‌ನಷ್ಟು ಉದ್ದವಿದ್ದು ಅಥವಾ ಮರದ ತುಂಡಿಗೆ ಸುತ್ತಿಟ್ಟುಕೊಂಡಿರಬೇಕು. ಸಿಗಡಿಯನ್ನು ಪೋಣಿಸಿದ ಗಾಳವನ್ನು ಬಿದಿರಿನ ಗೆಲ್ಲಿನ ತುದಿಗೆ ಸಿಕ್ಕಿಸಿ ನೀರಿನಲ್ಲಿರುವ ಚಪ್ಪಟೆ ಕಲ್ಲು ಕಲ್ಲಿನ ಬಿಲದೊಳಗೆ ಮೇಲೆತ್ತಿ ಇಡಬೇಕು. ಈ ರೀತಿ ಇಟ್ಟಾಗ ಪುರಿಯೊಲು

ಮೀನು ತಕ್ಷಣ ಸಿಗಡಿಯನ್ನು ಗಾಳ ಸಮೇತ ಕಚ್ಚಿಕೊಳ್ಳುತ್ತದೆ. ಈ ಸಂದರ್ಭದಲ್ಲಿ ಬಿದಿರಿನ ಗೆಲ್ಲಿನಿಂದ ಗಾಳವು ತಪ್ಪುತ್ತದೆ ಮತ್ತು ಮೀನು ಬಿಲದೊಳಗೆ ಎಳೆಯುತ್ತದೆ. ಮೀನು ಎಳೆದೊಯ್ಯುವಾಗ ಎಳೆಯದ ಐದು ನಿಮಿಷದವರೆಗೆ ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸದ ನಂತರ ಒಮ್ಮೆಲೆ ಎಳೆಯುತ್ತಾರೆ. ಆಗ ಮೀನಿನ ಬಾಯಿಯಲ್ಲಿ ಅಥವಾ ಹೊಟ್ಟೆಯೊಳಗೆ ಗಾಳ ಇದ್ದರೆ ಚುಚ್ಚಿಕೊಳ್ಳುತ್ತದೆ. ಆ ನಂತರ ಎಳೆದಾಗ ಮೀನು ತಪ್ಪಿಸಿಕೊಳ್ಳುವ ಪ್ರಮೇಯ ಕಡಿಮೆ ಇರುತ್ತದೆ. ಪುರಿಯೊಲು ಮೀನಿನ ಒಂದು ವಿಶೇಷತೆಯೆಂದರ ಆಹಾರವನ್ನು ಕಚ್ಚಿಕೊಂಡು ನುಂಗಿ ವೇಗವಾಗಿ ಓಡಲು ಪ್ರಯತ್ನಿಸುತ್ತದೆ. ಈ ಜಾತಿಯ ಮೀನುಗಳು ಹಗಲು ಹೊತ್ತಿನಲ್ಲಿ ಆಹಾರವನ್ನು ಅರಸಿಕೊಂಡು ಬರುತ್ತವೆ. ರಾತ್ರಿ ಹೊತ್ತಿನಲ್ಲಿ ಸಂಚರಿಸುವುದು ವಿರಳ.

**ಸಾಂಬಾರಿಗೆ ಸ್ವಚ್ಚಗೊಳಿಸುವ ವಿಧಾನ:**

ಸಿಕ್ಕಿರುವಂತಹ ಪುರಿಯೊಲು ಮೀನನ್ನು ಒಲೆಬೂದಿಯನ್ನು ಬಳಸಿಕೊಂಡು ಒರಟು ಕಲ್ಲಿನ ಮೇಲೆ ಮೀನಿನ ತಲೆಭಾಗವನ್ನು ಒಂದು ಕೈಯಲ್ಲಿ ಹಿಡಿದು ಕಲ್ಲಿನಲ್ಲಿ ಉದ್ದಕ್ಕೆ ಎಳೆಯುತ್ತಾರೆ. ಬೂದಿ ಹಾಕುವುದರಿಂದ ಅಂಟುದ್ರವ ಕಳೆದು ಹುರುಪೆ ಹೋಗಿ ಶುಭ್ರವಾಗುತ್ತದೆ. ನಂತರ ಅದರ ತಲೆಭಾಗವನ್ನು ಬಾಯಿ ಸಮೇತ ಸೀಳಬೇಕು. ಆಕಸ್ಮಿಕವಾಗಿ ಮೀನಿನ ಬಾಯಿಯಲ್ಲಿ ಆಹಾರ ಪದಾರ್ಥಗಳು ಹಾಗೆಯೇ ಉಳಿದುಕೊಂಡಿರುತ್ತದೆ.

## 2.5 ಓಟೆಬಾಲೆ ಮೀನು ಗಾಳ:

ಓಟೆಬಾಲೆ ಮೀನುಗಳು ಕಾಡಿನಲ್ಲಿ ಹರಿಯುವ ದೊಡ್ಡ ತೋಡುಗಳಲ್ಲಿ ಕಣಿವೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಮಳೆಗಾಲ ಮತ್ತು ಮಳೆಗಾಲ ಕಳೆದ ಬಳಿಕ ಬಿಸಿಲು ಆರಂಭವಾಗಿ ನಂತರ ಅಕ್ಟೋಬರ್ ನವೆಂಬರ್ ತಿಂಗಳಲ್ಲಿ ಬರುವ ಮಳೆಯ ಸಂದರ್ಭದಲ್ಲಿ ಈ ಮೀನುಗಳು ಸಿಗುತ್ತವೆ. ಕದಡು ಮಣ್ಣು ಮಿಶ್ರಿತ/ಮಳೆನೀರಿಗೆ ಇದರ ಬೇಟೆಯನ್ನು ನಡೆಸುತ್ತಾರೆ.

**ಬೇಟೆ ವಿಧಾನ:**

ಸಣ್ಣ ಬೈನೆ ಮರದ ಗೆಲ್ಲನ್ನು ಪಾಚೊಳ್ತಿ ಮೀನು ಬೇಟೆ ಸಂದರ್ಭದಲ್ಲಿ ಉಲ್ಲೇಖಿಸಿದ ಹಾಗೆ ತಯಾರು ಮಾಡಿ ಸೀಸವಿರುವ ಚಿಕ್ಕ ಗಾಳವನ್ನು ಬಳಸಿಕೊಳ್ಳಬೇಕು. ಗಾಳಕ್ಕೆ ಕಾಡಿನಲ್ಲಿ ಸಿಗುವ ಎರೆಹುಳವನ್ನು ಪೋಣಿಸಬೇಕು. ನಂತರ ಹರಿಯುವ ನೀರಿಗೆ ಗಾಳ ಹಾಕಬೇಕು. ಮಳೆ ನೀರಿಗೆ ಆಹಾರ ಹುಡುಕಿಕೊಂಡು ಬರುವ ಬಾಲೆ ಮೀನುಗಳು ಎರೆಹುಳವಿರುವ ಗಾಳವನ್ನು ಕಚ್ಚಿಕೊಂಡು ಓಡುವಾಗ ರಭಸವಾಗಿ ಎಳೆಯಬೇಕು ಹಾಗೆ ಎಳೆದಾಗ ಬಾಯಿಯ ಯಾವುದಾದರೂ ಒಂದು ಭಾಗಕ್ಕೆ ಗಾಳ ಚುಚ್ಚಿಕೊಳ್ಳುತ್ತದೆ. ನಂತರ ನಿಧಾನವಾಗಿ ನೀರಿನಿಂದ ಮೀನನ್ನು ಹೊರತೆಗೆಯಬೇಕು. ಈ ಜಾತಿಯ ಮೀನುಗಳನ್ನು ದ.ಕ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಶಿಬಾಜೆ, ಶಿಶಿಲ ಗ್ರಾಮಗಳಲ್ಲಿ ಕಾಣಬಹುದು.

ಮೀನು ಬೇಟೆಗಾರರು ತಿಳಿನೀರಿಗೆ ಮೀನು ಸಿಗದಿದ್ದಾಗ ಒಂದು ತಂತ್ರವನ್ನು ಹೆಣೆಯುತ್ತಾರೆ. ಅದೇನೆಂದರೆ ಮಳೆ ಬಾರದಿದ್ದಾಗ ಕಾಡಿನಲ್ಲಿ ಒಂದಷ್ಟು ಮಣ್ಣನ್ನು ಅಗೆದು ತಂದು ನೀರನ್ನು ಮಳೆ ನೀರಿನ ಹಾಗೆ ಮಣ್ಣು ಮಿಶ್ರಿತ ನೀರನ್ನಾಗಿ ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಮೀನುಗಳು ನೈಜವಾಗಿ ಮಳೆನೀರೆಂದು ಭಾವಿಸಿ ಗಾಳಕ್ಕೆ ಚುಚ್ಚಿಕೊಳ್ಳುವ ಸಂದರ್ಭಗಳು ಹೆಚ್ಚಿರುತ್ತವೆ. ಈ ರೀತಿಯಾಗಿ ಮೀನನ್ನು ಹಿಡಿಯುತ್ತಾರೆ. ಓಟೆಬಾಲೆ ಮೀನುಗಳು ಗುಂಪಾಗಿ ಇರುವುದರಿಂದ ತುಂಬಾ ಶೀಘ್ರವಾಗಿ ಹೆಚ್ಚು ಮೀನುಗಳು ಸಿಗುತ್ತವೆ. ಇದೇ ರೀತಿ ತೋಡುಗಳಲ್ಲಿ ಬಾಲೆ ಮೀನು, ಸೀರ್ಕೊಟೆ ಮೀನುಗಳನ್ನು ಹಿಡಿಯುತ್ತಾರೆ.

## 2.6 ಪೆರುವೊಲು ಮೀನು ಗಾಳ / ಮಹಷಿರ್

ಪೆರುವೊಲು ಮೀನುಗಳು ದೊಡ್ಡ ದೊಡ್ಡ ನದಿಗಳಲ್ಲಿ ಹೆಚ್ಚು ಕಾಣಸಿಗುತ್ತವೆ. ಪುಣ್ಯಕ್ಷೇತ್ರಗಳ ದಡದಲ್ಲಿ ಹರಿಯುವ ನದಿಗಳಲ್ಲಿ ಹೆಚ್ಚು ಕಂಡುಬರುತ್ತದೆ. ಉದಾ: ಬೆಳ್ತಂಗಡಿ ತಾಲೂಕಿನ ಶಿಶಿಲ/ಶಿಶಿಲೇಶ್ವರ ದೇವಸ್ಥಾನ, ಶೃಂಗೇರಿ, ಸುಳ್ಯ ತಾಲೂಕಿನ ತೋಡಿಕಾನ ಮಲ್ಲಿಕಾರ್ಜುನ ದೇವಸ್ಥಾನದ ತಟದಲ್ಲಿ ಈ ಮೀನುಗಳು ಕೈಗೆ ಸಿಗುವ ಹಾಗೆ ಬದುಕುತ್ತವೆ. ಬೇಸಿಗೆ ಕಾಲದಲ್ಲಿ ಭಕ್ತರು ಹಾಕಿದ ಅವಲಕ್ಕಿ, ಮಂಡಕ್ಕಿ, ಬೆಳ್ತಕ್ಕಿ, ಬ್ರೆಡ್, ಬಿಸ್ಕತ್ತು ಇತ್ಯಾದಿ ಆಹಾರವನ್ನು ತಿಂದು ಬದುಕುತ್ತವೆ. ಉಳಿದೆಡೆಗಳಲ್ಲಿ ಈ ಮೀನುಗಳು ಹೆಚ್ಚು ಆಳವಿರುವ ನದಿ ನೀರಿನಲ್ಲಿ ವಾಸಿಸುತ್ತವೆ. ಎಷ್ಟು ಹೊತ್ತಿಗಾದರೂ ಮೀನುಗಳು ಮೇಲೆ ಬಂದು ಹಾರುತ್ತವೆ. ಆದರೆ ಮನುಷ್ಯರ ಸದ್ದುಗದ್ದಲ ಇಲ್ಲದಿದ್ದರೆ ಮಾತ್ರ ಅವು ನೀರಿನ ಮೇಲ್ಮೈಗೆ ಬಂದು ಹಾರುತ್ತವೆ.

ಈ ಜಾತಿಯ ಮೀನುಗಳು 20 ಕೆ.ಜಿಗಿಂತಲೂ ಅಧಿಕವಾಗಿ ತೂಕವಿರುವುದನ್ನು ಕಾಣಬಹುದು. ಬೆಳ್ತಂಗಡಿ ತಾಲೂಕಿನ ಶಿಶಿಲದ ದೇವಸ್ಥಾನದಲ್ಲಿ ಒಂದು ದೊಡ್ಡಗಾತ್ರದ ಮೀನಿಗೆ ಚಿನ್ನದ ಮೂಗುತಿಯನ್ನು ಸಹ ಹಾಕಿದ್ದರು. ಇದು ದೇವರ ಮೀನೆಂದು ಪ್ರಸಿಧ್ಧಿಯಾಗಿತ್ತು. ಜಾತ್ರೆ ಸಂದರ್ಭದಲ್ಲಿ ಮಾತ್ರ ಇದು ಕಾಣಸಿಗುತ್ತದೆ. ಸುಮಾರು 20 ವರ್ಷಗಳ ಹಿಂದೆ ಕಿಡಿಗೇಡಿಗಳು ನೀರಿಗೆ ವಿಷ ಬೆರೆಸಿರುವುದರಿಂದ ಆ ಮೀನು ನಾಶವಾಗಿ ಹೋಯಿತು.

ದೊಡ್ಡ ಗಾತ್ರದ ಮೀನನ್ನು ತಿನ್ನುವುದು ಕಷ್ಟಕರ. ಯಾಕೆಂದರೆ ಆ ಮೀನಿನ ದೇಹದ ಮಧ್ಯ ಭಾಗದಲ್ಲಿ ಬಿಳಿ ನೂಲಿನ ರಚನೆಯಿದೆ. ಅದನ್ನು ಸಮೇತ ಸಾಂಬಾರು ಮಾಡಿದರೆ ವಾಂತಿ ಆಗುವ ಸಾಧ್ಯತೆ ಇರುತ್ತದೆ. ಅದಕ್ಕಾಗಿ ದೊಡ್ಡ ಗಾತ್ರದ ಮೀನನ್ನು ಸ್ವಚ್ಛ ಮಾಡುವ ಸಂದರ್ಭದಲ್ಲಿ ಆ ನೂಲನ್ನು ಜಾಗ್ರತೆಯಿಂದ ತೆಗೆಯುತ್ತಾರೆ. ದೊಡ್ಡ ಗಾತ್ರದ ಮೀನಿನ ಹೊಟ್ಟೆಯಲ್ಲಿ ಹಸಿರುಬಣ್ಣದಿಂದ ಕೂಡಿದ ಚೀಲವಿರುತ್ತದೆ. ಇದು ಸ್ವಚ್ಛ ಮಾಡುವಾಗ ಒಡೆದರೆ ಮೀನು ಸಂಪೂರ್ಣವಾಗಿ ಕಹಿಯಾಗಿರುತ್ತದೆ.

ಹಾಗಾಗಿ ದೇಹದಲ್ಲಿರುವ ಕಹಿ ಭಾಗವನ್ನು ಜಾಗರೂಕತೆಯಿಂದ ತೆಗೆಯಬೇಕು. ತುಳು ಭಾಷೆಯಲ್ಲಿ ಇದಕ್ಕೆ 'ಕೈಯ್ಪೆ' (ಕಹಿ) ಎಂದು ಕರೆಯುತ್ತಾರೆ.

**ಔಷಧಿಯ ಗುಣ**

ಪೆರುವೊಲು ಮೀನಿನ ಕೈಯ್ಪೆಯನ್ನು ಔಷಧವಾಗಿ ಬಳಸುತ್ತಾರೆ. ಹಸಿರು ಬಣ್ಣವಿರುವ ಈ ಕಹಿ ಪದಾರ್ಥವನ್ನು ಅದರ ಕಹಿ ಚೀಲ ಸಮೇತ ಹೊರತೆಗೆಯುತ್ತಾರೆ. ತೆಗೆದು ಅದರ ಮೇಲ್ಭಾಗವನ್ನು ಸ್ವಲ್ಪವೇ ತೆರೆದು ಕಹಿ ದ್ರವರೂಪ ಪದಾರ್ಥವು ಚೆಲ್ಲದ ಹಾಗೆ ಅಕ್ಕಿಯನ್ನು ಅದರ ಒಳಗೆ ಸೇರಿಸುತ್ತಾರೆ. ಆ ಚೀಲದ ಗಾತ್ರಕ್ಕೆ ಅನುಗುಣವಾಗಿ ಅಕ್ಕಿಯನ್ನು ಸೇರಿಸಿ ನೂಲಿನಲ್ಲಿ ಅದನ್ನು ಬಿಗಿಯಾಗಿ ಕಟ್ಟಿ ಒಲೆಯ ಮೇಲ್ಭಾಗದಲ್ಲಿ ಕಟ್ಟುತ್ತಾರೆ. ಬೆಂಕಿಯ ಬಿಸಿಗೆ ಹಸಿರುಬಣ್ಣದ ನೀರನ್ನು ನಾವು ಹಾಕಿದಂತಹ ಅಕ್ಕಿಯು ಹೀರಿಕೊಳ್ಳುತ್ತವೆ. ಅಕ್ಕಿಯನ್ನು ತೆಗೆದು ಚಿಕ್ಕ ಡಬ್ಬದಲ್ಲಿ ತುಂಬಿಸಿಡಬೇಕು. ಅಕ್ಕಿಯು ಹಸಿರು ಬಣ್ಣಕ್ಕೆ ಬದಲಾಗುತ್ತದೆ. ಡಬ್ಬವನ್ನು ಬಿಸಿ ಶಾಖ ತಾಗುವ ಹಾಗೆ ಬಚ್ಚಿಡಬೇಕು. (ಜಂತು ಹುಳು ಬಾಧೆ)ಹೊಟ್ಟೆ ಹುಳುವಿನಿಂದ ಹೊಟ್ಟೆ ನೋವಾಗುವ ಮಕ್ಕಳಿಗೆ ಬರೇ ಎರಡೇ ಎರಡು ಅಕ್ಕಿ ಕಾಳನ್ನು ಬಾಯಿಯಲ್ಲಿ ಹಾಕಿಕೊಂಡರೆ ಹೊಟ್ಟೆನೋವು ತಕ್ಷಣ ಕಡಿಮೆಯಾಗುತ್ತದೆ. ಚಿಕ್ಕ ಮಕ್ಕಳ ಹೊಟ್ಟೆನೋವಿಗೆ ಇದು ರಾಮಬಾಣವಿದ್ದಂತೆ.

**ಬೇಟೆ ವಿಧಾನ:**

ಪೆರುವೊಲು ಮೀನು ಬೇಟೆಯನ್ನು ಮಳೆಗಾಲದಲ್ಲಿ ಹೆಚ್ಚಾಗಿ ಮಾಡುತ್ತಾರೆ. ಇದಕ್ಕೆ ಬಳಸುವ ಆಹಾರವೆಂದರೆ ಎರೆಹುಳು ಜೊತೆಗೆ ಗದ್ದೆಗಳಲ್ಲಿ ಸಿಗುವ ನಂಗ್ (ಬಸವನಹುಳುವನ್ನು ಹೋಲುವ), ನರ್ತೆ ಅದರೊಳಗಿನ ಮಾಂಸ, ಚಿಕ್ಕ ಏಡಿ ಅದರ ಕಾಲನ್ನೆಲ್ಲ ಮುರಿದು ತೆಗೆಯಬೇಕು. ಗೊಬ್ಬರದ ಹುಳ, ಮಣ್ಣಿನಲ್ಲಿ ಸಿಗುವ ಗೊಬ್ಬರದ ಹುಳುವಿನ ಹಾಗೆ ಹೋಲುವ ಹುಳ ಇದಕ್ಕೆ ತುಳು ಭಾಷೆಯಲ್ಲಿ 'ತಿಂಗೊಲು ಪುರಿ' ಎಂದು ಕರೆಯುತ್ತಾರೆ. ಇವುಗಳನ್ನು ಸಾಧಾರಣ ದೊಡ್ಡ ಗಾತ್ರದ ಹುಳುಗಳಿಗೆ ಇವುಗಳನ್ನು ಪೋಣಿಸುತ್ತಾರೆ. ರಭಸವಾಗಿ ಹರಿಯುವ ನದಿ ನೀರಿನಲ್ಲಿ ಹೆಚ್ಚು ಉದ್ದವಿರುವ ಗಾಳದ ಪ್ಲಾಸ್ಟಿಕ್ ತಂತಿಯನ್ನು ಬಳಸಬೇಕು. ಆಹಾರವನ್ನು ಗಾಳಕ್ಕೆ ಪೋಣಿಸಿ ಸೀಸ ಹೊಂದಿರುವ ಗಾಳದ ತಂತಿಯನ್ನು ನೀರಿಗೆ ಎಸೆದಾಗ ಪೆರುವೊಲು ಮೀನುಗಳು ಆಹಾರವನ್ನು ಕಚ್ಚಿ ಎಳೆದುಕೊಂಡು ಓಡುತ್ತವೆ. ಆ ಸಂದರ್ಭದಲ್ಲಿ ಒಮ್ಮೆಲೆ ಎಳೆಯಬೇಕು ಈ ರೀತಿ ಎಳೆಯುವುದಕ್ಕೆ ತುಳು ಭಾಷೆಯಲ್ಲಿ 'ಕಂತ್ ಪಾಡುನ' ಎಂದು ಕರೆಯುತ್ತಾರೆ. ಈ ರೀತಿ ಎಳೆದಾಗ ಮೀನಿನ ಬಾಯಿಗೆ ಗಾಳವು ಚುಚ್ಚಿಕೊಳ್ಳುತ್ತದೆ. ನಂತರ ಕೈಯ್ಯಲ್ಲಿದ್ದ ಒಂದು ತುದಿಯನ್ನು ಸ್ವಲ್ಪ ಎಳೆಯಬೇಕು. ಆವಾಗ ಮೀನು ಕೂಡ ಸ್ವಲ್ಪ ದೂರ ಬರುತ್ತದೆ. ನಂತರ ಪುನಃ ವಿರುದ್ಧ ದಿಕ್ಕಿಗೆ ಓಡುತ್ತದೆ. ಆವಾಗ ಕೂಡ ಸ್ವಲ್ಪ ಹಿಡಿದೆಳೆಯಬೇಕು. ಹೀಗೆ ನಾಲ್ಕೈದು ಬಾರಿ ಮಾಡಿದಾಗ ಮೀನಿಗೆ ಆಯಾಸವಾಗುತ್ತದೆ. ಮೀನಿನ ವೇಗ ಕಡಿಮೆಯಾದಾಗ ನಂತರ ನಿಧಾನವಾಗಿ ಎಳೆದಾಗ ಮೀನು ತನ್ನಿಂದ ತಾನೆ ಬರುತ್ತದೆ. ಇಲ್ಲದಿದ್ದರೆ ಈ

ಜಾತಿಯ ಮೀನು ಹೆಚ್ಚು ವೇಗವನ್ನು ಹೊಂದಿರುತ್ತದೆ. ಕೆಲವೊಂದು ಬಾರಿ ಮೀನು ವೇಗವಾಗಿ ಹಿಡಿದೆಳೆದಾಗ ಪ್ಲಾಸ್ಟಿಕ್ ತಂತಿ ಅರ್ಧಕ್ಕೆ ತುಂಡಾಗುವ ಸನ್ನಿವೇಶವೂ ಇರುತ್ತದೆ. ಹಾಗಾಗಿ ಪೆರುವೊಲು ಜಾತಿಯ ಮೀನನ್ನು ಹಿಡಿಯುವ ಸಂದರ್ಭದಲ್ಲಿ ಈ ರೀತಿಯ ವಿಧಾನವನ್ನು ಅಳವಡಿಸಿಕೊಂಡು ಅದನ್ನು ಪಳಗಿಸಿದ ರೀತಿಯಲ್ಲಿ ಹಿಡಿಯುವುದು ಸುಲಭವಾಗುತ್ತದೆ.

## 2.7 ಮಡೆಂಜಿ ಮೀನು ಗಾಳ/ಗೆಂಡೆ ಮೀನು ಗಾಳ

ಮಡೆಂಜಿ ಜಾತಿಯ ಮೀನು ಬೇಸಿಗೆ ಕಾಲದಲ್ಲಿ ಮೊಟ್ಟೆ ಇಟ್ಟು ಮರಿ ಮಾಡುತ್ತವೆ. ಇದು ನದಿಯ ನಿಂತ ನೀರಿನಲ್ಲಿ, ದೊಡ್ಡ ದೊಡ್ಡ ತೋಡುಗಳಲ್ಲಿ ವಾಸ ಮಾಡುತ್ತವೆ. ಮತ್ತು ಮರಗಳ ನೆರಳಿನಲ್ಲಿ ಇದು ಹೆಚ್ಚಾಗಿ ಆಶ್ರಯ ಪಡೆಯುತ್ತವೆ. ಇವುಗಳು ಹೆಣ್ಣು ಗಂಡು ಎರಡೂ ಒಟ್ಟಿಗೆ ವಾಸ ಮಾಡುತ್ತವೆ. ಇವು ಕಡಿಮೆ ನೀರಿರುವ ತಂಪಾದ ಜಾಗಕ್ಕೆ ಬಂದು ಮೊಟ್ಟೆ ಇಡುತ್ತದೆ. ಹೆಣ್ಣು ಮೊಟ್ಟೆ ಇಟ್ಟು ಮರಿಯಾದ ನಂತರ ಗಂಡು ಮೀನು ತನ್ನ ಮರಿಗಳಿಗೆ ಕಾವಲುಗಾರನ ಹಾಗೆ ರಕ್ಷಣೆಯನ್ನು ಒದಗಿಸುತ್ತದೆ. ಮರಿಯಾದ ನಂತರ ಇತರ ಕೆಲವು ಮೀನುಗಳು ಈ ಮರಿಗಳನ್ನು ತಿನ್ನಲು ಹಾತೊರೆಯುತ್ತಿರುತ್ತವೆ. ಉದಾ: ಕೊಂತಿ ಜಾತಿಯ ಮೀನು ಹೆಚ್ಚು ಇದನ್ನು ತಿನ್ನಲು ಬಯಸುತ್ತಿರುತ್ತದೆ. ಮಡೆಂಜಿ ಮೀನು ಅತ್ಯಂತ ಸೂಕ್ಷ್ಮ ಸಂವೇದನೆ ಉಳ್ಳಂತಹ ಮೀನು ಮನುಷ್ಯನ ನೆರಳು, ಸದ್ದು ಕೇಳಿದ ತಕ್ಷಣ ಬದಿಯಲ್ಲಿದ್ದ ಮೀನು ಅತ್ಯಂತ ವೇಗವಾಗಿ ನೀರಿನ ಆಳಕ್ಕೆ ಧಾವಿಸುತ್ತವೆ. ಇವು ನದಿಯ ದಡದಲ್ಲಿರುವ ಮರದ ಬೇರಿನ ಸಂದುಗಳಲ್ಲಿ, ನೀರಿನಲ್ಲಿರುವ ಹುಲ್ಲಿನ ಸಂದುಗಳಲ್ಲಿ ಮೊಟ್ಟೆ ಇಡುತ್ತವೆ. ಈ ಜಾತಿಯ ಮೀನು ಮೊರಂಟೆ ಮೀನನ್ನು ಹೋಲುತ್ತದೆ. ಆದರೆ ಗಾತ್ರದಲ್ಲಿ ಆರೇಳು ಕೆ.ಜಿ ತೂಗುವಷ್ಟು ಬೆಳೆಯುತ್ತದೆ. ಇದರ ಮೈಯೆಲ್ಲಾ ಹುರುಪೆಗಳಿರುತ್ತವೆ. ಮೀನಿನ ಎರಡೂ ಬದಿಗೆ ಮಧ್ಯದಲ್ಲಿ ಕೆಂಪು ಮಿಶ್ರಿತ ಚುಕ್ಕೆಗಳಿರುತ್ತವೆ. ಪಾಚಿ ಮೈ ಬಣ್ಣ ಹೊಂದಿದ್ದು ಅದರ ಹೊಟ್ಟೆಯ ಭಾಗ ಬಿಳಿಯಾಗಿರುತ್ತದೆ ಮತ್ತು ತಲೆಯು ದೊಡ್ಡದಾಗಿರುತ್ತದೆ. ಇದರ ಎರಡೂ ಕಿವಿರುಗಳ ಮಧ್ಯೆ ಪರೋಪಕಾರಿ ಚಿಕ್ಕ ಜೀವಿಗಳು ಆಶ್ರಯವನ್ನು ಪಡೆಯುತ್ತವೆ. ಹಾಗಾಗಿ ಸಾಂಬಾರು ಮಾಡುವ ಸಂದರ್ಭದಲ್ಲಿ ಅದರ ತಲೆಯನ್ನು ತುಂಡರಿಸಿ ಬಿಸಾಡುತ್ತಾರೆ. ಅದರ ಹುರುಪೆಯನ್ನು ತೆಗೆದು ಸಣ್ಣ ತುಂಡುಗಳನ್ನಾಗಿ ಪರಿವರ್ತಿಸಿ ಸಾಂಬಾರು ಮಾಡುತ್ತಾರೆ. ಇದರ ಮಾಂಸದಲ್ಲಿ ಮುಳ್ಳುಗಳು ಕಡಿಮೆ ಇರುತ್ತದೆ.

**ಬೇಟೆ ವಿಧಾನ:**

ಮಡೆಂಜಿ ಮೀನಿಗೆ ಸಂಬಂಧಿಸಿದ ಹಾಗೆ ಕೆಲವು ಗಾದೆಗಳಿವೆ. ಮಡೆಂಜಿ ಪೋಯಿನಲ್ಪ ಕಳೆಂಕ್ ತಪ್ಪಂದ್ (ಮಡೆಂಜಿ ಮೀನು ಹೋದಲ್ಲಿ ನೀರು ಕದಡದೆ ಇರದು), ನಕ್ಕುರು ಸುರಿದ್ ಮಡೆಂಜಿ ಒಯಿಪರೆ ತೂಯಿಲೆಕ್ಕಾಂಡ್ (ಎರೆಹುಳ ಪೋಣಿಸಿ ಮಡೆಂಜಿ ಮೀನನ್ನು ಹಿಡಿಯಲು ಪ್ರಯತ್ನಿಸಿದ ಹಾಗೆ) ಅಂದರೆ ವ್ಯರ್ಥ ಪ್ರಯತ್ನ ಮಾಡು ಎಂದರ್ಥ. ಮಡೆಂಜಿ ಮೀನಿಗೆ ಪ್ರಿಯವಾದ ಆಹಾರವೆಂದರೆ

ಕಪ್ಪೆ. ಹಾಗಾಗಿ ಗಾಳಕ್ಕೆ ಕಪ್ಪೆಯನ್ನೇ ಬಳಸುತ್ತಾರೆ. ಕಪ್ಪೆಯನ್ನು ಜೀವಂತವಾಗಿ ಹಿಡಿದು ಅದರ ಬೆನ್ನಿನ ಚರ್ಮಕ್ಕೆ ಗಾಳವನ್ನು ಚುಚ್ಚುತ್ತಾರೆ. ಚರ್ಮಕ್ಕೆ ಮಾತ್ರ ಗಾಳವನ್ನು ಚುಚ್ಚುವುದರಿಂದ ಕಪ್ಪೆಯು ಸಾಯುವುದಿಲ್ಲ. ಕಪ್ಪೆಯ ಬೆನ್ನಿಗೆ ಚುಚ್ಚಿದಂತಹ ಗಾಳವನ್ನು ಸ್ವಲ್ಪ ದಪ್ಪವಾದ ಪ್ಲಾಸ್ಟಿಕ್ ಹಗ್ಗವನ್ನು ನದಿಯಲ್ಲಿರುವ ನೀರಿಗೆ ಬಗ್ಗಿಕೊಂಡಿರುವ ಗಿಡದ ಗೆಲ್ಲುಗಳಿಗೆ ಕಟ್ಟಿ ಕಪ್ಪೆಯನ್ನು ನೀರಿನಲ್ಲಿ ಇಳಿಯ ಬಿಟ್ಟಿರುತ್ತಾರೆ. ಜೀವಂತ ಕಪ್ಪೆಯು ನೀರಿನಲ್ಲಿ ಈಜಾಡಿಕೊಂಡಿರುತ್ತದೆ. ಸ್ವಲ್ಪ ಸಮಯದ ಬಳಿಕ ಇದನ್ನು ನೋಡಿದ ಮಡೆಂಜಿ ಮೀನು ವೇಗವಾಗಿ ಕಪ್ಪೆಯನ್ನು ತಿನ್ನಲು ತಕ್ಷಣ ಬಾಯಿ ಹಾಕುತ್ತದೆ. ಆಗ ಕಪ್ಪೆಯ ಬೆನ್ನಿನ ಮೇಲಿರುವ ಗಾಳದಲ್ಲಿ ಮಡೆಂಜಿ ಮೀನು ಸಿಕ್ಕಿಹಾಕಿಕೊಳ್ಳುತ್ತದೆ. ಮನುಷ್ಯರ ಕುತಂತ್ರವನ್ನು ಅರಿಯದ ಮಡೆಂಜಿ ಮೀನುಗಳು ಸುಲಭದಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ.

ಮಡೆಂಜಿ ಮೀನನ್ನು ತೋಟದಲ್ಲಿರುವ ಕೆರೆಗಳಲ್ಲಿ, ಬಾವಿಗಳಲ್ಲಿ ಸಾಕುತ್ತಾರೆ. ಈ ರೀತಿ ಸಾಕಿದಾಗ ಅದಕ್ಕೆ ಆಹಾರವಾಗಿ ಕಪ್ಪೆಯನ್ನು ಹಿಡಿದು ಹಾಕುತ್ತಾರೆ.

ದ.ಕ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಕೊಕ್ಕಡ ವೈದ್ಯನಾಥೇಶ್ವರ ದೇವಸ್ಥಾನದ ಕೆರೆಯಲ್ಲಿ ಮಡೆಂಜಿ ಮೀನುಗಳು ಹೆಚ್ಚಾಗಿ ಕಂಡುಬರುತ್ತದೆ.

**ನಂಬಿಕೆಗಳು**

ಪೆರುವೊಲು ಮೀನಿನ ಕುರಿತಾಗಿ ಜನಪದರಲ್ಲಿ ಈಗಲೂ ಕೆಲವು ನಂಬಿಕೆಗಳಿವೆ. ಅವುಗಳಾವುದೆಂದರೆ ಮನುಷ್ಯರ ಕೈ ಕಾಲುಗಳಲ್ಲಿ ದುರ್ಮಾಂಸ ಕಾಣಿಸಿಕೊಂಡಾಗ ಬೆಳ್ತಂಗಡಿ ತಾಲೂಕಿನ ಶಿಶಿಲೇಶ್ವರ ದೇವಸ್ಥಾನಕ್ಕೆ 'ಕೆಡು ಹೋದರೆ ಹಣ್ಣು ಕಾಯಿ ಮಾಡಿಸಿ ಪೆರುವೋಲು ಮೀನಿಗೆ ಅಕ್ಕಿ ಹಾಕುತ್ತೇನೆ' ಎಂದು ಹರಕೆ ಹೇಳಿದರೆ ಕೆಲವು ಸಮಯದ ನಂತರ ಈ ಕೆಡು ದೇಹದಿಂದ ಮಾಯವಾಗುತ್ತದೆ ಅನ್ನುವ ನಂಬಿಕೆ ಇದೆ. ಮೀನಿಗೆ ಅಕ್ಕಿ ಹಾಕಿದವರು ನಂತರ ಯಾವುದೇ ಸಂದರ್ಭದಲ್ಲಿಯೂ ಈ ಪೆರುವೋಲು ಮೀನನ್ನು ತಿನ್ನಬಾರದು ಎಂಬ ನಂಬಿಕೆ ಈಗಲೂ ಜನಪದರಲ್ಲಿದೆ.

**2.8 ಕೊಂಬೆಟ್ಟಿ ಗಾಳ:**

ಕೋಡು ಇರುವ ಸಿಗಡಿಯನ್ನು ಕೊಂಬೆಟ್ಟಿ ಎಂದು ಕರೆಯುತ್ತಾರೆ. ಕೋಡು ಇರುವ ಸಿಗಡಿಯು ಬೇಸಿಗೆ ಕಾಲದಲ್ಲಿಯೂ ನೀರಿರುವ ಕಾಡಿನ ಗುಂಡಿಗಳಲ್ಲಿ ಕಾಣ ಸಿಗುತ್ತವೆ. ಕಾಡಿನಲ್ಲಿರುವ ಬೊಳ್ಪಲೆ ಮರದ ಬೇರುಗಳ ಎಡೆಗಳಲ್ಲಿ ಇವು ಆಶ್ರಯವನ್ನು ಪಡೆಯುತ್ತವೆ.

**ಬೇಟೆ ವಿಧಾನ:**

ಕೊಂಬೆಟ್ಟ ಮೀನುಗಾರಿಕೆ ಮಾಡುವಾಗ ಎರಡು ಜನರಿರಬೇಕು. ಸಾಧಾರಣ ಮೊರಂಟೆ ಮೀನಿನ ಗಾಳವನ್ನು ಇಲ್ಲಿ ಬಳಸುತ್ತಾರೆ. ಎರೆಹುಳವನ್ನು ಪೋಣಿಸಿದ ಗಾಳವನ್ನು ನಿಧಾನವಾಗಿ ನೀರಿಗೆ ಇಳಿಬಿಟ್ಟು ಆಡಿಸುತ್ತಾರೆ. ಆಗ ಮರದ ಬಿಲದಲ್ಲಿರುವ ಕೊಂಬೆಟ್ಟಗಳು ನಿಧಾನವಾಗಿ ಹೊರಗೆ ಬಂದು ಗಾಳದಲ್ಲಿರುವ ಎರೆಹುಳವನ್ನು ತಿನ್ನಲು ಬರುತ್ತವೆ. ಆಗ ನಿಧಾನವಾಗಿ ಗಾಳವನ್ನು ಹಿಂದೆ ಹಿಂದೆ ಸರಿಸುತ್ತಾ ಬರುತ್ತಾರೆ. ಬಿಲದಿಂದ ಸ್ವಲ್ಪ ದೂರ ಬಂದ ತಕ್ಷಣ ಗಾಳ ಕಚ್ಚಿಕೊಳ್ಳಲು ಇಡುತ್ತಾರೆ. ಆಗ ಕಚ್ಚಿದಂತಹ ಕೊಂಬೆಟ್ಟಿಯನ್ನು ನೀರಿನಿಂದ ಮೇಲಕೆತ್ತಿ ದಡಕ್ಕೆ ಹಾಕುತ್ತಾರೆ. ದಡಕ್ಕೆ ಹಾಕುವಾಗ ಇನ್ನೊಬ್ಬ ಹಿಡಿಯಲು ತಯಾರಿರಬೇಕು. ಇಲ್ಲಾಂದ್ರೆ ನೀರಿಗೆ ಹಾರಿ ಅವುಗಳು ಬಚಾವಾಗುತ್ತದೆ. ಅಥವಾ ಗಾಳವನ್ನು ಕಚ್ಚಿಕೊಂಡು ಮರದ ಬಿಲದೊಳಗೆ ಗಾಳವನ್ನು ಎಳೆದುಕೊಂಡು ಹೋದರೆ ಮತ್ತೆ ಯಾವುದೇ ಕಾರಣಕ್ಕೂ ಸಿಗಡಿಗಳು ಸಿಗುವುದಕ್ಕೆ ಸಾಧ್ಯತೆ ಇರುವುದಿಲ್ಲ. ಅಂದರೆ ಅದರಲ್ಲಿರುವ ಕೊಂಬಿನಲ್ಲಿ ಗಟ್ಟಿಯಾಗಿ ಹಿಡಿದುಕೊಂಡಿದೆ. ಪಾಲಿಥಿನ್ ತಂತಿಯನ್ನು ತುಂಡರಿಸುವ ಸಂದರ್ಭಗಳು ಇರುತ್ತವೆ.

# ಅಧ್ಯಾಯ 3

# ಕಡು ಹಾಕುವ ವಿಧಾನ

## ಅಧ್ಯಾಯ 3

# ಕಡು ಹಾಕುವ ವಿಧಾನ

## 3.1 ಪಾರಂಪರಿಕ ವಿಧಾನ

### 3.1.1 ಬ್ಯಾರಿಬಿತ್ತ್ ಹಾಕುವುದು

ಬ್ಯಾರಿ ಬಿತ್ತ್ ಎಂದರೆ ಒಂದು ವಿಷಯುಕ್ತಕಾಯಿ. ಇದನ್ನು ಸಾಮಾನ್ಯವಾಗಿ ಹಳ್ಳಿಗಳಲ್ಲಿ ಮೀನಿಗೆ ಕಡು/ವಿಷ ಹಾಕುವುದಕ್ಕಾಗಿ ಬಳಸುತ್ತಾರೆ. ಈ ಬೀಜವು ಸಾಧಾರಣ 2 ವರ್ಷದ ಗಿಡಗಳಲ್ಲಿ ಕಾಣಸಿಗುತ್ತದೆ. ಮೊದಲು ಹೂ ಬಿಟ್ಟು ಆನಂತರ ಕಾಯಿಗಳಾಗುತ್ತದೆ. ಗಿಡಗಳು ಸಾಮಾನ್ಯವಾಗಿ 10 ರಿಂದ 12 ವರ್ಷಗಳಷ್ಟು ಕಾಲ ಜೀವಂತವಾಗಿರುತ್ತವೆ. ಕಡು ಹಾಕುವ ಉದ್ದೇಶದಿಂದಲೇ ಈ ಗಿಡಗಳನ್ನು ಬೆಳೆಸುತ್ತಾರೆ. ಒಂದು ಕಾಯಿಯ ಒಳಗೆ  ನೆಲಗಡಲೆಕಾಯಿ ಕಾಳಿನಷ್ಟು ಗಾತ್ರದ 3 ಕಾಳುಗಳಿರುತ್ತದೆ. ಇದನ್ನು ಚಿಕ್ಕ ಮಕ್ಕಳಿಂದ ದೂರವಿಡಬೇಕು. ಮನುಷ್ಯ ತಿಂದರೆ ವಾಂತಿಭೇಧಿಯಾಗುವ ಸಂಭವ ಜಾಸ್ತಿಯಾಗಿರುತ್ತದೆ. ಬಲಿತ ಕಾಯಿಗಳು ಉದುರತೊಡಗಿದಾಗ ಅವುಗಳನ್ನು ಹೆಕ್ಕಿ ತಂದು ಒಣಗಿಸುತ್ತಾರೆ. ಒಣಗಿಸಿದ ನಂತರ ಕಾಲಿನಿಂದ ತುಳಿದು ಕಾಯಿಯಿಂದ ಕಾಳುಗಳನ್ನು ಬೇರ್ಪಡಿಸುತ್ತಾರೆ. ಬೇರ್ಪಡಿಸಿದ ಕಾಳುಗಳನ್ನು ಜೋಪಾನವಾಗಿಡುತ್ತಾರೆ. ಮೀನು ಹಿಡಿಯುವ ದಿನ ನದಿ, ತೋಡುಗಳ ನೀರಿನ ಆಳ ಮತ್ತು ಜಾಗದ ವಿಸ್ತಾರಕ್ಕೆ ಅನುಗುಣವಾಗಿ ಕಾಳುಗಳನ್ನು ಸೇರು ಲೆಕ್ಕದಲ್ಲಿ ಅಳತೆ ಮಾಡುತ್ತಾರೆ. ಒಂದು ಸೇರು ಕಾಳಿಗೆ, ಅರ್ಧ ಸೇರಿನಷ್ಟು ಸಣ್ಣಮುಂಚಿ(ಚಿಕ್ಕ ಮೆಣಸು) ಅಥವಾ ಜೀರಿಗೆ ಮೆಣಸು/ಕಾಗೆ ಮೆಣಸನ್ನು ಬೆರೆಸುತ್ತಾರೆ. ಈ ಮೆಣಸನ್ನು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಹಾವು ಮೀನು ಅಥವಾ ಮಲೆಜ್ಜಿ ಮೀನು ಕಡು ಹಾಕುವ ಗುಂಡಿಯಲ್ಲಿ ಇದೆ ಎಂದಾದರೆ ಬ್ಯಾರಿ ಬೀಜಕ್ಕೆ /ಬಿತ್ತಿಗೆ ಸಾಸಿವೆ ಕಾಳನ್ನು ಕಾಲು ಕೆ.ಜಿಯಷ್ಟು ಜೀರಿಗೆ ಮೆಣಸಿನ ಜೊತೆಗೆ ಸೇರಿಸುತ್ತಾರೆ. ಬ್ಯಾರಿ ಬಿತ್ತ್ ಮತ್ತು ಮೆಣಸನ್ನು ಒಟ್ಟಾಗಿ ಸೇರಿಸಿ ಸಾಂಬಾರು ಅರೆಯುವ ಕಲ್ಲಿನಲ್ಲಿ ಕಡೆಯುತ್ತಾರೆ. ಹೀಗೆ ಮೆಣಸು ಮತ್ತು ಕಾಳು ಸೇರಿದಾಗ ತೆಂಗಿನಕಾಯಿ ಚಟ್ನಿಯ ಬಣ್ಣವನ್ನು ಹೋಲುತ್ತದೆ. ಇದಕ್ಕಾಗಿ ಹಣ್ಣಾದ ಜೀರಿಗೆ ಮೆಣಸನ್ನು ಮೊದಲೇ ಒಣಗಿಸಿಡುತ್ತಾರೆ. ಕಾಯಿಯನ್ನು ಅರೆಯುವ ಸಂದರ್ಭದಲ್ಲಿ ಮೂಗಿಗೆ ಬಟ್ಟೆಯನ್ನು ಕಟ್ಟಿಕೊಳ್ಳುತ್ತಾರೆ. ಮತ್ತು ಬರೀ ಕೈಯಿಂದ ಕಡೆಯುವ ಸಂದರ್ಭದಲ್ಲಿ ಮುಟ್ಟಬಾರದು. ತೆಂಗಿನ ಗೆರಟೆಯಿಂದ ತಯಾರಿಸಿದ ಸೌಟು/ ತುಳುಭಾಷೆಯ 'ಕೈಲ್' ಎಂದು ಕರೆಯುವ ಸೌಟನ್ನು ಅಥವಾ ಅಡಿಕೆ ಹಾಳೆಯಿಂದ ತಯಾರಿಸಿದ ಸೌಟನ್ನು ಬಳಸಬೇಕು. ಚಟ್ನಿಯಷ್ಟು ಗಾತ್ರಕ್ಕೆ ನುಣ್ಣಗಾದ ನಂತರ ಒಂದು ಪಾತ್ರೆಗೆ ಅದನ್ನು ತೆಗೆದು ಕಲ್ಲು ತೊಳೆದ ನೀರನ್ನು ಸಹ ಪಾತ್ರೆಗೆ ಸುರಿಯುತ್ತಾರೆ. ನದಿ ಅಥವಾ ತೋಡುಗಳಲ್ಲಿ ನೀರು ಹರಿಯುವುದನ್ನು ತಡೆದು ಗುಂಡಿಗಳಲ್ಲಿರುವ ಮೀನುಗಳು ಯಾವುದೇ ಕಾರಣಕ್ಕೂ ಮೇಲೆ ಕೆಳಗೆ ಹೋಗದಂತೆ ಅಥವಾ ಬೇರೆ ಯಾವುದೇ ಕಡೆಯಿಂದ ಕಡು ಹಾಕುವ ಗುಂಡಿಗೆ ನೀರು ಸೇರದ ಹಾಗೆ ಎಚ್ಚರವಹಿಸಬೇಕು. ನಂತರ ಕಡೆದು ತಂದ

ಬ್ಯಾರಿಬಿತ್ತ್ ಮಿಶ್ರಣವನ್ನು ಒಂದು ಅಡಕೆ ಮರದ ಹಾಳೆಗೆ ಮರಳನ್ನು ಹಾಕಿ ಅದಕ್ಕೆ ಸೇರಿಸುತ್ತಾರೆ. ಸೌಟನಿಂದ ಚೆನ್ನಾಗಿ ಹಾಳೆಯಲ್ಲಿ ಮಿಶ್ರಣ ಮಾಡಿ ಯೋಜನೆ ರೂಪಿಸಿದ ಗುಂಡಿಗೆ ಎಸೆಯುತ್ತಾರೆ. ಸಾಧಾರಣ ಗುಂಡಿಯಾದರೆ ಮರಳು ಮಿಶ್ರಿತ ಕಡುಹಾಕಿದ ನಂತರ ಕಾಲಿನಿಂದ ನೀರನ್ನು ಕದಡುತ್ತಾರೆ. ಇಳಿಯಲಿಕ್ಕೆ ಅಸಾಧ್ಯ ಗುಂಡಿಯಾದರೆ ಮರದ ಗೆಲ್ಲನ್ನು ನೀರಿಗೆ ಹಾಕಿ ಆ ಗೆಲ್ಲನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಎಳೆಯುತ್ತಾರೆ. ಆವಾಗ ಬ್ಯಾರಿಬಿತ್ತ್ ವಿಷ ನೀರಿನಲ್ಲಿ ಸೇರಿ ಹೋಗುತ್ತದೆ. ಸ್ವಲ್ಪ ಹೊತ್ತಾದ ತಕ್ಷಣ ಕೆಲವು ಮೀನುಗಳು ಉರಿ ತಾಳಲಾರದೆ ಸಾಯುತ್ತವೆ. ಕೆಲವು ಮೀನುಗಳು ದಡಕ್ಕೆ ಬರುತ್ತವೆ. ಕೆಲವು ಮೀನುಗಳು ಉರಿತಾಳಲಾರದೆ ನದಿಯ ದಡಕ್ಕೆ ಹಾರುವ ಸಂದರ್ಭಗಳು ಇರುತ್ತವೆ. ಕೆಲವು ಮೀನುಗಳು ಆ ಗುಂಡಿಯಿಂದ ನೀರು ಹರಿದು ಹೋಗುವ ದಿಕ್ಕಿಗೆ ಇಳಿಯಲಾರಂಭಿಸುತ್ತದೆ. ಆವಾಗ ಅಲ್ಲಿ 'ಕೂರಿ' ಅನ್ನುವ ಸಾಧನವನ್ನು ಬಳಸಿ ಮೀನುಗಳು ಅದರಲ್ಲಿ ಸೇರುವ ಹಾಗೆ ಮಾಡುತ್ತಾರೆ. ಮತ್ತು ಮಂಕರಿಯ ಸಹಾಯದಿಂದಲೂ ನೀರಿನ ಮುಂಭಾಗಕ್ಕೆ ಬರುವ ಮೀನನ್ನು ಹಿಡಿಯುತ್ತಾರೆ. ಮತ್ತು ಅಡಿಕೆ ಮರದ ಸಲಾಕೆಯನ್ನು ಕತ್ತಿಯ ಹಾಗೆ ಅಣಿಗೊಳಿಸಿ ನೀರಿನ ಬದಿಗೆ ಬರುವಂತಹ ಬಾಲೆ, ಮುಗುಡು, ಪುರಿಯಾಲು, ಮಲೆಜ್ಜಿ ಮೀನನ್ನು ಹೊಡೆದು ಸಾಯುತ್ತಾರೆ. ಈ ಸಂದರ್ಭದಲ್ಲಿ ಅಡಿಕೆ ಮರದ ಹಾಳೆಯಿಂದ ತಯಾರಿಸಿದ ಮೂಡೆಯನ್ನು ಮೀನು ಹಾಕಲು ಬಳಸುತ್ತಾರೆ. ಸಾಸಿವೆ ಹಾಕಿದ ಪರಿಣಾಮವಾಗಿ ಹಾವು ಮೀನಿನ ಕಣ್ಣು ಸಹ ಬಿಳಿ ಬಣ್ಣಕ್ಕೆ ತಿರುಗುತ್ತದೆ. ಎಲ್ಲಾ ಮೀನು ಹಿಡಿದ ನಂತರ ಯಥಾ ಪ್ರಕಾರ ಹಾಕಿದಂತಹ ಕಟ್ಟವನ್ನು ತೆಗೆದು ನೀರು ಹರಿಯಲು ಬಿಡುತ್ತಾರೆ.

ಬ್ಯಾರಿಬಿತ್ತ್ ಹಾಕುವ ವಿಧಾನದಲ್ಲಿ ಹರಿವ ನೀರಿಗೆ ಹಾಕಿದರೆ ಅದನ್ನು ತುಳುಭಾಷೆಯಲ್ಲಿ 'ಪರಿಪ ಕಡು' ಎಂದು ಕರೆಯುತ್ತಾರೆ. ಅಂದರೆ ಈ ಮೇಲೆ ಉಲ್ಲೇಖಿಸಿದ ವಿಧಾನದಲ್ಲಿ ಕಡು ಹಾಕುವ ಗುಂಡಿಗೆ ಸಿಹಿ ನೀರಿನ ಒಳಹರಿವು ಇರದ ಹಾಗೆ ಎಚ್ಚರ ವಹಿಸಿದರೆ ಹರಿವ ನೀರಿಗೆ ಹಾಕಿದಾಗ ಆ ಗುಂಡಿಗೆ ಅಡ್ಡಲಾಗಿ ಬಲೆ ಬಿಡುತ್ತಾರೆ. ಮತ್ತು ಕೆಳಗೆ ನೀರು ಹರಿದು ಹೋಗುವ ಜಾಗಕ್ಕೆ ಕೂರಿ ಇಡುತ್ತಾರೆ. ಕಡು ಹಾಕಿದ ಪರಿಣಾಮವಾಗಿ ಮೇಲ್ಮುಖವಾಗಿ ಮೀನುಗಳು ಹತ್ತದೆ ಕೆಳ ಮುಖವಾಗಿ ಇಳಿದು/ಕೆಳಗೆ ಹೋಗುತ್ತವೆ, ಆಗ ಕೂರಿಗಳಲ್ಲಿ ಅವು ಸಿಕ್ಕಿ ಹಾಕಿಕೊಳ್ಳುವ ಸಂದರ್ಭಗಳು ಹೆಚ್ಚಾಗಿರುತ್ತವೆ. ಕಡು ಹಾಕಿದ ಪರಿಣಾಮವಾಗಿ ಮೀನುಗಳು ಕಣ್ಣುರಿಯಿಂದ ಅಡ್ಡಾದಿಡ್ಡಿ ಓಡಾಡುತ್ತವೆ. ಆಗ ಅಡ್ಡಲಾಗಿರುವ ಬಲೆಗೆ ಸಿಕ್ಕಿ ಹಾಕಿಕೊಳ್ಳುತ್ತವೆ.

### 3.1.2 ಬ್ಯಾರಿ ಬಿತ್ತ್ ಗಿಡದ ಎಲೆ

ಕಡು ಹಾಕುವ ಸಂದರ್ಭಗಳಲ್ಲಿ ಬ್ಯಾರಿಬಿತ್ತ್ ಗಿಡದ ಎಲೆಗಳನ್ನು ಬಳಸುತ್ತಾರೆ. ಪೂರ್ವ ಯೋಜನೆಯಂತೆ ಯಾವುದಾದರೂ ನದಿ, ತೋಡು, ಹಳ್ಳಗಳಲ್ಲಿ ಮೀನಿದ್ದರೆ ಅದಕ್ಕೆ ಸಿಹಿನೀರಿನ ಒಳಹರಿವು ಇರದ ಹಾಗೆ ಅಡ್ಡಲಾಗಿ ಕಟ್ಟ/ಕಟ್ಟೆಯನ್ನು ಕಟ್ಟುತ್ತಾರೆ. ಬ್ಯಾರಿಬಿತ್ತ್ ಎಲೆಗಳನ್ನು ಮತ್ತು ಗುಂಡಿಯಲ್ಲಿನ ನೀರು, ಆಳಗಳನ್ನು ಪರಿಗಣಿಸಿಕೊಳ್ಳಬೇಕು. ಕಿತ್ತಂತಹ ಎಲೆಗಳನ್ನು ಮನೆಯಲ್ಲಿರುವ ನೆಲಕುರಿ/ನೆಲಗುರಿಯಲ್ಲಿ ಎಲೆ ಮತ್ತು ಒಲೆಯ ಬೂದಿಯನ್ನು ಸೇರಿಸಿ ಪುಡಿ ಮಾಡುತ್ತಾರೆ. ಪುಡಿ ಮಾಡುವ ಸಂದರ್ಭದಲ್ಲಿ ಮುಖಕ್ಕೆ ಬಟ್ಟೆಯನ್ನು ಕಟ್ಟಿಕೊಳ್ಳಬೇಕು. ಇಲ್ಲದಿದ್ದರೆ ಕಣ್ಣು, ಮುಖದಲ್ಲಿ ಬೆಂಕಿ ಬಂದ ಅನುಭವವಾಗುತ್ತದೆ. ಇದು ಬ್ಯಾರಿಬಿತ್ತ್ ಕಾಳಿಗಿಂತಲೂ ಹೆಚ್ಚು ಖಾರವಾಗಿರುತ್ತದೆ. ಈ ರೀತಿ ತಯಾರಿಸಿದ ಕಡುವನ್ನು ನೀರಿಗೆ ಹಾಕಿ ಅನಂತರ ನೀರನ್ನು ಕಾಲಿನಿಂದ ಮರದ ಗೆಲ್ಲನ್ನು ಬಳಸಿಕೊಂಡು ಕದಡಬೇಕು. ಅರ್ಧ ತಾಸಿನ ನಂತರ ಮೀನುಗಳು ಸಾಯಲಾರಂಭಿಸುತ್ತವೆ. ಕೆಲವು ದೊಡ್ಡ ಮೀನುಗಳು ಉರಿ ತಡೆಯಲಾರದೆ ದಡಕ್ಕೆ ಬರಲಾರಂಭಿಸುತ್ತವೆ. ಆವಾಗ ಮೀನು ಹಿಡಿಯುತ್ತಾರೆ.

### 3.1.3 ಕಾರೆಕಾಯಿ ಹಾಕುವುದು

ಕಡು ಹಾಕುವ ವಿಧಾನಗಳಲ್ಲಿ ಇದು ಕೂಡ ಒಂದು. ಮನುಷ್ಯ /ಹಳ್ಳಿಗಾಡಿನ ಮನುಷ್ಯ ಪ್ರಕೃತಿಗೆ ಹತ್ತಿರವಾಗಿರುವುದರಿಂದ ವಸ್ತುವಿನ ಒಳಿತು ಕೆಡುಕಿನ ಬಗ್ಗೆ ಅರಿವನ್ನೂ ಆತ ಹೊಂದಿರುತ್ತಾನೆ. ಹಾಗಾಗಿ ಯಾವ ಕಾಯಿಗಳು ಯಾವುದಕ್ಕೆ ಸೂಕ್ತ ಅನ್ನುವ ಕಲ್ಪನೆ ಅವನಿಗಿರುತ್ತದೆ. ಕಾಡಿನಲ್ಲಿ ಸಿಗುವ ಕಾರೆಕಾಯಿಯಲ್ಲಿ ಎರಡು ವಿಧಗಳಿವೆ. **ಒಂದನೆಯದ್ದು:-** 'ಮುಳ್ಳುಕಾರೆ' ಸಾಧಾರಣ ಮರವಾಗುತ್ತದೆ. ಮರದಲ್ಲಿ ಹೆಚ್ಚು ಉದ್ದವಾದ ಮುಳ್ಳುಗಳಿರುತ್ತವೆ. ಅದರ ಕಾಯಿ ಸಾಮಾನ್ಯವಾಗಿ ಕೆಂಪು ಕಡಲೆಯಷ್ಟು ಗಾತ್ರ ಹೊಂದಿದ್ದು ಹಣ್ಣಾದಾಗ ಹಳದಿ ಬಣ್ಣವನ್ನು ಹೊಂದಿರುತ್ತದೆ. ಇದನ್ನು ಮನುಷ್ಯರು ತಿನ್ನುತ್ತಾರೆ. ಸಾಧಾರಣ ಸಿಹಿ ಮತ್ತು ಒಗರು ರುಚಿಯನ್ನು ಹೊಂದಿರುತ್ತದೆ. ಈ ಕಾಯಿಯನ್ನು ತಿಂದಾಗ ನಾಲಿಗೆಯಲ್ಲಿ ಅಂಟಿಕೊಂಡಿರುವ ಕಫದ ರೀತಿಯ ವಸ್ತು ಕರಗಿ ನಾಲಿಗೆ ಮತ್ತು ಗಂಟಲು ಶುಭ್ರಗೊಳ್ಳುತ್ತವೆ. ಇದು ಬೇಸಿಗೆಯಲ್ಲಿ ಕಾಯಿ ಬಿಡುತ್ತದೆ. ಇದನ್ನು ಹಲವು ವಿಧದ ಹಕ್ಕಿಗಳೂ ತಿನ್ನುತ್ತವೆ.

**ಇನ್ನೊಂದು ವಿಧ**

**ಕಡಮ್ಮ ಕಾರೆ**

ಇದು ದೊಡ್ಡ ಕಾಡುಗಳಲ್ಲಿ ಸ್ವಲ್ಪ ದೊಡ್ಡ ಗಾತ್ರದ ಮರವಾಗಿ ಬೆಳೆಯುತ್ತದೆ. ಕಾಯಿಗಳು ಹಣ್ಣಾಗಿ ಬಿದ್ದ ನಂತರ ಅದನ್ನು ಕಡವೆಗಳು ಹೆಚ್ಚಾಗಿ ತಿನ್ನುತ್ತಿದ್ದುದ್ದರಿಂದ ಅದಕ್ಕೆ ಆ ಹೆಸರು ಬಂದಿದೆ. ಈ ಕಡವೆ ಕಾಯಿಗಳು ಕಿತ್ತಲೆ ಆಕಾರವನ್ನು ಹೊಂದಿದ್ದು ಸಾಧಾರಣ ಗಾತ್ರದ ಈರುಳ್ಳಿಯಷ್ಟು ಬೆಳೆಯುತ್ತದೆ. ಕಾಯಿ ಇರುವಾಗಲೇ ಕೊಯ್ಯಲು ನೆಲಗುರಿ ಅಥವಾ ನದಿಯಲ್ಲಿರುವ ಬಂಡೆಕಲ್ಲಿನ ಮೇಲೆ ಹಾಕಿ ಒಲೆ ಬೂದಿಯ ಸಮೇತ ಪುಡಿ ಮಾಡುತ್ತಾರೆ. ಪುಡಿ ಮಾಡಿದ ಕಾರೆಕಾಯಿಯನ್ನು ನೀರಿನ ಒಳ

ಹರಿವು ಇರುವ ಜಾಗಕ್ಕೆ ಇದನ್ನು ಸ್ವಲ್ಪ ಸ್ವಲ್ಪವೇ ಹಾಕಿ ನೀರನ್ನು ಕದಡಬೇಕು. ಕದಡಿದಾಗ ನೀರಿನಲ್ಲಿ ನೊರೆ ಏಳುತ್ತವೆ. ಕಡವಕಾಯಿ ಅತ್ಯುತ್ತಮ ಮಾರ್ಜಕವಾಗಿದೆ. ನೀರಿನಲ್ಲಿ ಈ ರೀತಿ ಕದಡುವುದರಿಂದ ಕಾಯಿಯ ಉರಿಗೆ ಮೀನುಗಳು ಸಾಯುತ್ತವೆ ಮತ್ತು ಸಾಧಾರಣ ಮೀನುಗಳು ಸ್ಥಿರವಿಲ್ಲದ ರೀತಿಯಲ್ಲಿ ಉರಿ ತಡೆಯಲಾರದೆ ಓಡಾಡುತ್ತಿರುತ್ತವೆ. ಈ ರೀತಿಯಾಗಿ ಓಡುವ ಸಂದರ್ಭದಲ್ಲಿ ಮಂಕರಿಯ ಸಹಾಯದಿಂದ ಮೀನು ಹಿಡಿಯುತ್ತಾರೆ. ಕಾರೆಕಾಯಿ ಹಾಕಿ ಮೀನು ಹಿಡಿಯುವ ಸಂದರ್ಭ ಹಾವು ಮೀನುಗಳು ಕೂಡ ಸಿಗುತ್ತವೆ. ಅಂದರೆ ಮೀನುಗಳಿಗೆ ಅಷ್ಟು ಖಾರವಾಗುತ್ತದೆ.

ಕಾರೆಕಾಯಿ ಹಾಕಿದ ಗುಂಡಿಯ ನೀರನ್ನು ದನಕರುಗಳು ಕುಡಿದರೂ ಅವುಗಳ ಜೀವಕ್ಕೆ ಏನು ತೊಂದರೆಯಾಗುವುದಿಲ್ಲ ಯಾಕೆಂದರೆ ಕಡವೆಗಳ ಕಾಯಿಯನ್ನು ತಿನ್ನುವುದರಿಂದ ಅದಕ್ಕೆ ಯಾವ ತೊಂದರೆಯೂ ಆಗುವುದಿಲ್ಲ.

### 3.1.4 ಒಡ್ಯೆ ಬಿಳಲು

ಒಡ್ಯೆ ಬಿಳಲು ಹಾಕುವ ಈ ವಿಧಾನ ಹೆಚ್ಚು ವಿಷಕಾರಿ ಅಲ್ಲದ್ದು. ಒಡ್ಯೆ ಬಿಳಲು ಸಾಮಾನ್ಯವಾಗಿ ದೊಡ್ಡ ದೊಡ್ಡ ಕಾಡುಗಳಲ್ಲಿ ಕಾಣಸಿಗುತ್ತವೆ. ಇದು ಸೀಗೆಕಾಯಿ ಬಿಳಲನ್ನು ಹೋಲುತ್ತದೆ. ಇದನ್ನು ಕಾಡಿನಲ್ಲಿರುವ ಹಳ್ಳ ತೋಡುಗಳಿಗೆ ಹಾಕಿ ಮೀನು ಹಿಡಿಯುತ್ತಾರೆ. ಒಡ್ಯೆ ಬಿಳಲನ್ನು ತುಂಡು ಮಾಡಿ ಜಜ್ಜಿ ನೀರಿಗೆ ಹಾಕುತ್ತಾರೆ. ಸಾಮಾನ್ಯವಾಗಿ ಒಡ್ಯೆ ಬಿಳಲನ್ನು ಹಾಕಿದ ನೀರು ಸಾಧಾರಣ ಕೆಂಪು ಬಣ್ಣಕ್ಕೆ ತಿರುಗುತ್ತದೆ. ಇದು ಸಹ ನೊರೆ ತರುವ ವಸ್ತುವಾಗಿದೆ. ಬಿಳಲನ್ನು ಜಜ್ಜಿ ಹಾಕಿದ ನಂತರ ನೀರನ್ನು ಚೆನ್ನಾಗಿ ಕದಡುತ್ತಾರೆ. ನೀರಿನ ಆಳದ ಪ್ರಮಾಣವನ್ನು ಗಮನದಲ್ಲಿಟ್ಟುಕೊಂಡು ಒಡ್ಯೆ ಬಿಳಲನ್ನು ಹಾಕಬೇಕು. ಒಡ್ಯೆ ಬಳ್ಳಿ ಹೆಚ್ಚು ಆದರೆ ಮೀನುಗಳು ಸತ್ತು ನೀರಿನ ಆಳದಲ್ಲಿ ಮುಳುಗಿ ಹೋಗುವ ಸಂಭವ ಹೆಚ್ಚಿರುತ್ತದೆ. ಆದುದರಿಂದ ಇದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಒಡ್ಯೆ ಬಿಳಲು ಹಾಕಿ ಮೀನು ಹಿಡಿಯುತ್ತಾರೆ. ಈ ವಿಧಾನವನ್ನು ಬೆಳ್ತಂಗಡಿ ತಾಲೂಕಿನಲ್ಲಿ ಶಿಬಾಜೆ, ಶಿಶಿಲ ಗ್ರಾಮಗಳಲ್ಲಿ ಅನುಸರಿಸುತ್ತಾರೆ. ಈ ಗ್ರಾಮಗಳು ದಟ್ಟವಾದ ಕಾಡುಗಳ ತಪ್ಪಲಿನಲ್ಲಿರುವುದರಿಂದ ಇದರ ಬಳಕೆಯನ್ನು ಕಾಣಬಹುದು. ಒಡ್ಯೆ ಬಿಳಲು ಹಾಕಿದ ನೀರನ್ನು ಕುಡಿದ ಪ್ರಾಣಿಗಳಿಗೆ ಯಾವುದೇ ರೀತಿಯಲ್ಲಿ ಪ್ರಾಣಾಪಾಯವಿರುವುದಿಲ್ಲ. ಕಾರಣ ಪ್ರಕೃತಿ ಸಹಜವಾಗಿ ಬೆಳೆಯುವ ವಸ್ತುವಾಗಿರುವುದರಿಂದ ಯಾವುದೇ ಅಪಾಯ ಇರುವುದಿಲ್ಲ.

### 3.1.5 ಮಡೆಂಜಿ ಬೂರು (ಬಿಳಲು)

ತುಳು ಭಾಷೆಯಲ್ಲಿ ಬಿಳಲಿಗೆ 'ಬೂರು' ಅನ್ನುವ ಪದ ಬಳಸುತ್ತಾರೆ. ಮಡೆಂಜಿ ಬಿಳಲು ದೊಡ್ಡ ದೊಡ್ಡ ಕಾಡುಗಳಲ್ಲಿ ಇದನ್ನು ಕಾಣಬಹುದು. ಹೆಸರೇ ಸೂಚಿಸುವಂತೆ ಮಡೆಂಜಿ ಮೀನುಗಳಿಗೆ ಇದು ರಾಮಬಾಣ. ಆದುದರಿಂದ ಈ ಹೆಸರು ಬಂದಿದೆ. ಮಡೆಂಜಿ ಬಿಳಲನ್ನು ನಿಂತ ನೀರಿಗೂ ಬಳಸುತ್ತಾರೆ.

ಮತ್ತು ಹರಿಯುವ ನೀರಿಗೂ ಇದನ್ನು ಬಳಸುತ್ತಾರೆ. ಇಲ್ಲಿ ರಭಸವಾಗಿ ನೀರಿನ ಹರಿವು ಇರಬಾರದು. ಮಡೆಂಜಿ ಮೀನುಗಳು ಹೆಚ್ಚಾಗಿರುವ ಗುಂಡಿಗಳಿಗೆ ಈ ಮಡೆಂಜಿ ಬಿಳಲನ್ನು ಗುದ್ದಿ/ಜಜ್ಜಿ ಹಾಕುತ್ತಾರೆ. ಇತರ ಮೀನುಗಳು ಸಹ ಈ ವಿಧಾನದಲ್ಲಿ ಸಾಯುತ್ತವೆ. ಆದರೆ ಮಡೆಂಜಿ ಮೀನುಗಳು ಅದರ ಖಾರ ಅಥವಾ ಉರಿಯನ್ನು ತಾಳಲಾರದೆ ನೀರಿನ ದಡಕ್ಕೆ ಹಾರುತ್ತವೆ. ಈ ಬಿಳಲನ್ನು ಹಾಕಿದ ಗುಂಡಿಯ ನೀರನ್ನು ಪ್ರಾಣಿ ಪಕ್ಷಿಗಳು ಸೇವನೆ ಮಾಡಿದರೆ ಯಾವುದೇ ರೀತಿಯಲ್ಲಿ ಪ್ರಾಣಭಯ ಇರುವುದಿಲ್ಲ. ಮಡೆಂಜಿ ಬಿಳಲನ್ನು ಬೆಳ್ತಂಗಡಿ ತಾಲೂಕಿನ ಶಿಶಿಲ, ಶಿಬಾಜೆ, ಉದನೆ ಈ ಸ್ಥಳಗಳಲ್ಲಿ /ಪ್ರದೇಶಗಳಲ್ಲಿ ಹೆಚ್ಚಾಗಿ ಬಳಸುತ್ತಾರೆ. ಕಾಡಿನಲ್ಲಿಯೇ ಬಿಳಲನ್ನು ಕಡಿದು ಜಜ್ಜಿ ನೀರಿಗೆ ಹಾಕಿ ಮೀನು ಹಿಡಿದುಕೊಂಡು ಬರುತ್ತಾರೆ.

### 3.1.6 ಕಾಳು ಮೆಣಸು ಬಿಳಲು

ಕಾಡಿನಲ್ಲಿ ಬೆಳೆಯುವ ಕಾಳುಮೆಣಸು ಬಳ್ಳಿಯನ್ನು ಜಜ್ಜಿ ನಿಂತಿರುವ ನೀರಿಗೆ ಹಾಕಿ ಮೀನು ಹಿಡಿಯುತ್ತಾರೆ. ಹರಿಯುವ ನೀರಿಗೆ ಕಡು ಹಾಕಿದರೆ ಮೀನು ಸಿಗುವ ಸಂದರ್ಭಗಳು ಕಡಿಮೆ ಇರುತ್ತದೆ. ಕಾಡಿನಲ್ಲಿರುವ/ ಕಾಡಿನಲ್ಲಿ ಬೆಳೆಯುವ ಕಾಳು ಮೆಣಸು ಬಳ್ಳಿ ಮತ್ತು ಕುದ್ಕ ಮುಂಚಿ(ನರಿ ಮೆಣಸು) ಬಳ್ಳಿಯನ್ನು ಜಜ್ಜಿ ಕಾಡಿನಲ್ಲಿ ಮೀನಿರುವ ತೋಡುಗಳಿಗೆ ನೀರಿನ ಹರಿವನ್ನು ಬೇರೆಡೆಗೆ ತಿರುಗಿಸಿ ಆ ಗುಂಡಿಗಳಿಗೆ ಹಾಕುತ್ತಾರೆ. ಕಾಡಿನಲ್ಲಿ ಬೆಳೆದಂತಹ ಕಾಳುಮೆಣಸು ಬಳ್ಳಿ ಸಾಮಾನ್ಯವಾಗಿ ನಾವು ಮನೆಯಲ್ಲಿ ಬೆಳೆಯುವಂತಹ ಕಾಳುಮೆಣಸು ಬಳ್ಳಿಯನ್ನೇ ಹೋಲುತ್ತದೆ. ಮತ್ತು ಅದರಲ್ಲಿ ಕಾಳು ಮೆಣಸು ಆಗುತ್ತದೆ. ಆದರೆ ಕಾಳು ಮೆಣಸು ಆಗುವ ಪ್ರಮಾಣ ಕಡಿಮೆ ಇರುತ್ತದೆ. ಹಾಗಾಗಿ ಅಂತಹ ಬಳ್ಳಿಯನ್ನೇ ಆಯ್ಕೆ ಮಾಡಿಕೊಂಡು ಜಜ್ಜಿ ಹಾಕುತ್ತಾರೆ. ಹೆಚ್ಚು ಬೆಳೆದ ಬಳ್ಳಿಯನ್ನೇ ಆಯ್ಕೆ ಮಾಡುತ್ತಾರೆ. ನರಿ ಮೆಣಸು ಬಳ್ಳಿಯ ಎಲೆಯು ಚೂಪಾಗಿರುತ್ತದೆ. ಮೆಣಸು ಹಣ್ಣಾದಾಗ ಹಕ್ಕಿಗಳು ಮಾತ್ರ ತಿನ್ನುತ್ತವೆ. ನಮ್ಮ ಉಪಯೋಗಕ್ಕೆ ಬರುವುದಿಲ್ಲ. ಕಾಳು ಮೆಣಸಿನ ಗಾತ್ರವು ಕೊತ್ತಂಬರಿ ಕಾಳಿನಷ್ಟು ಆಗಿರುತ್ತದೆ. ಮತ್ತು ಖಾರದ ಪ್ರಮಾಣ ಕಡಿಮೆ ಇರುತ್ತದೆ. ಹೆಚ್ಚು ಬೆಳೆದಂತಹ ನರಿ ಕಾಳು ಮೆಣಸಿನ ಬಳ್ಳಿಯನ್ನು ಮಾತ್ರ ಬಳಸುತ್ತಾರೆ. ಕಾಡುಕಾಳು ಮೆಣಸಿನ ಬಳ್ಳಿಯನ್ನು ಹಾಕಿದ ನಂತರ ನೀರಿನ ಬಣ್ಣವು ಸಾಧಾರಣ ಕಪ್ಪುಬಣ್ಣಕ್ಕೆ ತಿರುಗುತ್ತದೆ. ಚಿಕ್ಕ ಚಿಕ್ಕ ಮೀನುಗಳು ಬಳ್ಳಿಯ ಖಾರಕ್ಕೆ ಸಾಯುತ್ತವೆ. ದೊಡ್ಡ ಮೀನುಗಳು ತಕ್ಷಣ ಸಾಯದೆ ಉರಿ ತಾಳಲಾರದೆ ಬದಿಗೆ ಬರುತ್ತವೆ. ಆವಾಗ ಕೋಲಿನಿಂದ ಹೊಡೆಯುತ್ತಾರೆ. ಅಥವಾ ಮಂಕರಿ ಸಹಾಯದಿಂದ ಹಿಡಿಯುತ್ತಾರೆ. ಈ ರೀತಿ ಕಡು ಹಾಕಿದ ನೀರನ್ನು ಪ್ರಾಣಿಗಳು ಸೇವಿಸಿದರೆ ಪ್ರಾಣಾಪಾಯ ಇರುವುದಿಲ್ಲ.

### 3.1.7 ತಿಪುಳು ಹಾಕುವುದು (ತಿಪುಳ ಪಾಡುನ)

ತಿಪುಳ ಎಂದರೆ ಕಾಡಿನಲ್ಲಿ ಬಳ್ಳಿಯಲ್ಲಿ ಬೆಳೆಯುವಂತಹ ಬೆಳೆಯುವಂತಹ ಗೊಂಚಲು. ಗೊಂಚಲು ಗೊಂಚಲು ಕಾಯಿಗೆ ತಿಪುಳು ಎಂದು ಕರೆಯುತ್ತಾರೆ. ಹಳ್ಳಿಗಾಡಿನ ಜನರು ಪ್ರಕೃತಿ

ಸಹಜವಾಗಿ ಬೆಳೆಯುವುದರಿಂದ ಪ್ರತಿಯೊಂದು ವಸ್ತುವಿನ ಉಪಯೋಗ ಮತ್ತು ಸಾಧಕ ಬಾಧಕಗಳ ಅರಿವು ಇದ್ದೇ ಇರುತ್ತದೆ. ಈ ಮಾತಿಗೆ ತಿಪುಳು ಹಾಕುವ ವಿಧಾನವು ಹೊರತಾದುದಲ್ಲ. ತಿಪುಳ್ ಕಾಯಿಯು ದ್ರಾಕ್ಷಿಯ ಹಾಗೆ ಗೊಂಚಲು ಗೊಂಚಲಾಗಿ ಬೆಳೆಯುತ್ತದೆ. ಬಟಾಣಿ ಕಾಳಿಗಿಂತ ಸ್ವಲ್ಪ ದೊಡ್ಡದಾಗಿ ಬೆಳೆಯುತ್ತದೆ. ಇದು ಬಿಳಿ ಬಣ್ಣದ ಕಾಯಿಯಾಗಿರುತ್ತದೆ. ಕಾಯಿಯು ಬೆಳೆತಿದೆ/ಮಾಗಿದೆ ಅಂದ ಮೇಲೆ ಬಿಳಿಬಣ್ಣದಿಂದ ಸ್ವಲ್ಪ ಕಂದು ಬಣ್ಣಕ್ಕೆ ತಿರುಗುತ್ತದೆ. ಹಣ್ಣಾದಾಗ ಕಾಡಿನಲ್ಲಿ ಮಂಗಟೆ ಹಕ್ಕಿ ತಿನ್ನುತ್ತವೆ. ತಿಪುಳು ಕಾಯಿಯ ಬಳ್ಳಿಗಳು ಎತ್ತರವಾದ ಮರವನ್ನು ಆಶ್ರಯಿಸಿ ಬೆಳೆಯುತ್ತದೆ. ಬೆಳೆದ ಕಾಯಿಗಳನ್ನು ಗೊಂಚ ಗೊಂಚಲಾಗಿ ಕೊಯ್ದು ಸಾಧ್ಯವಾದಷ್ಟು ನೆಲಕ್ಕೆ ತಾಗದ ಹಾಗೆ ಮೇಲಿಟ್ಟು ಒಣಗಿಸುತ್ತಾರೆ. ಬೇಸಿಗೆ ಕಾಲದಲ್ಲಿ ನದಿ ನೀರು ಕಡಿಮೆಯಾದಾಗ ಒಣಗಿಸಿದಂತಹ ತಿಪುಳ ಕಾಯಿಯನ್ನು ಕಲ್ಲಿನಿಂದ ಜಜ್ಜುತ್ತಾರೆ. ಕಾಯಿ ಒಡೆದಾಗ ಅದರ ಒಳಗೆ ಬಿಳಿ ಬಣ್ಣದ ಕಾಯಿ ಇರುತ್ತದೆ. ಅದನ್ನು ಸ್ವಲ್ಪ ಸಂಗ್ರಹ ಮಾಡಿಟ್ಟುಕೊಳ್ಳಬೇಕು. ಸಾಧಾರಣ200 ಗ್ರಾಂನಷ್ಟು ಅದರ ತಿರುಳು ಸಿಗಬೇಕಾದರೆ ಕಡಿಮೆ ಅಂದರೆ ಅರ್ಧ ಕೆ.ಜಿಯಷ್ಟು ಕಾಯಿಯನ್ನು ಜಜ್ಜಬೇಕು. ಒಳ ತಿರುಳನ್ನು ಸಂಗ್ರಹಿಸಿದ ನಂತರ ನದಿದಡದಲ್ಲಿರುವ ಎರೆಹುಳವನ್ನು ಅಗೆಯಬೇಕು. ಬೇಸಿಗೆ ಕಾಲವಾದುದರಿಂದ ನದಿದಡದಲ್ಲಿ ಮಾತ್ರ ಎರೆಹುಳಗಳು ಇರುತ್ತವೆ. ಆದ್ದರಿಂದ ಎರೆಹುಳವನ್ನು ಅಗೆದು ನೀರಿನಲ್ಲಿ ಚೆನ್ನಾಗಿ ತೊಳೆಯಬೇಕು. ತೊಳೆದಂತಹ ಎರೆಹುಳವನ್ನು ಮತ್ತು ತಿಪುಳಿನ ತಿರುಳನ್ನು ಒಟ್ಟಾಗಿ ಕತ್ತಿಯ ಬೆನ್ನಿನಿಂದ ಸಮತಟ್ಟಾದ ಕಲ್ಲಿನ ಮೇಲೆ ತುಂಡರಿಸಬೇಕು. ನಂತರ ಅರ್ಧ ತಾಸಿನಷ್ಟು ಬಿಸಿಲಿನಲ್ಲಿ ಇಡಬೇಕು. ಈ ರೀತಿ ಇಡುವುದರಿಂದ ತಿಪುಳಿನಲ್ಲಿರುವ ವಿಷದ ಅಂಶ ಎರೆಹುಳದ ತುಂಡುಗಳು ಹೀರಿಕೊಳ್ಳುತ್ತವೆ. ನಂತರ ಒಂದು ತೆಂಗಿನಕಾಯಿಯ ಗೆರಟೆಯಲ್ಲಿಟ್ಟುಕೊಂಡು ನಿಂತ ನದಿಯ ನೀರಿಗೆ ಸಾಧಾರಣ ಮಧ್ಯಾಹ್ನದ ಹೊತ್ತು ಸ್ವಲ್ಪ ಸ್ವಲ್ಪವೇ ಎಸೆಯಬೇಕು. ಸಾಧಾರಣ ಅರ್ಧ ಗಂಟೆಯಾದ ನಂತರ ತಿಪುಳಿನ ಮಿಶ್ರಣದಲ್ಲಿದ್ದ ಎರೆಹುಳವನ್ನು ತಿಂದ ನಂತರ ಮೀನುಗಳು ತಲೆಸುತ್ತು ಬಂದ ಹಾಗೆ ಆಗಿ ನೀರಿನ ಮೇಲ್ಭಾಗಕ್ಕೆ ಬರುತ್ತವೆ. ಆವಾಗ ಮೀನು ಹಿಡಿಯಲು ತಯಾರಿರಬೇಕು. ಮೀನುಗಳು ವಿಷದ ತೀವ್ರತೆ ತಡೆಯಲಾರದೆ ನೆಗೆದಾಡುತ್ತವೆ. ತಕ್ಷಣ ನೀರಿಗೆ ಹಾರಿ ಹಿಡಿಯಬೇಕು. ಇಲ್ಲಾಂದ್ರೆ ಮೀನುಗಳು ನೀರಿನ ಆಳಕ್ಕೆ ಹೋಗುತ್ತವೆ. ಮತ್ತೆ ಸಿಗುವುದಿಲ್ಲ ಮತ್ತು ಸ್ವಲ್ಪ ಸಮಯದ ನಂತರ ವಾಸ್ತವ ಸ್ಥಿತಿಗೆ ಮರಳಿ ಮೀನುಗಳು ಯಥಾಸ್ಥಿತಿಗೆ ಬರುತ್ತವೆ. ಕೆಲವೊಂದು ಸಣ್ಣ ಮೀನುಗಳು ತಿಪುಳಿನ ವಿಷದ ತೀವ್ರತೆಗೆ ಸಾಯುತ್ತವೆ. ನದಿನೀರಿನಲ್ಲಿರುವ ತಬ್ರೋನಿ, ಅಬ್ರೋನಿ ಮೀನು ಸಾಯುತ್ತವೆ.

ಮತ್ತೆ ಕೆಲವು ಸಂದರ್ಭಗಳಲ್ಲಿ ಚಿಕ್ಕ ಮರಿ ಏಡಿಗಳನ್ನು ಹಿಡಿದು ಅದರ(ಎಲ್ಲಿಂಗರ್) ಬೆರಳುಗಳನ್ನು ಮುರಿಯದೆ ಹೊಟ್ಟೆಯೊಳಗಿಂದ ಎಲ್ಲವನ್ನು ತೆಗೆದು ಹೊಟ್ಟೆಯೊಳಗೆ ಎರೆಹುಳ ಮಿಶ್ರಿತ ತಿಪುಳನ್ನು ತುಂಬಿಸಿ ಸಣ್ಣ ನೂಲಿನಿಂದ ಏಡಿಯ ಹೊಟ್ಟೆಯು ತೆರೆದುಕೊಳ್ಳದ ಹಾಗೆ ಸ್ವಲ್ಪ ಸುತ್ತುತ್ತಾರೆ. ಈ ರೀತಿಯ ಏಡಿ ಮರಿಯನ್ನು ನೀರಿನೊಳಗೆ ಮುಳುಗಿ ಕಲ್ಲಿನ ಎಡೆಯಲ್ಲಿ ಇಟ್ಟು ಬಿಡುತ್ತಾರೆ. ಈ ರೀತಿ ಇಟ್ಟಿದ್ದನ್ನು ಹಾವು ಮೀನುಗಳು ತಿನ್ನುತ್ತವೆ. ಹಾವು ಮೀನುಗಳು ಹಿಡಿಯಲು ಸಿಗುತ್ತವೆ. ಮತ್ತು

ನೀರಿನಲ್ಲಿರುವ ಆಮೆಗಳು ತಿಂದು ಹಿಡಿಯಲು ಸಿಗುವ ಸಂದರ್ಭ ಹೆಚ್ಚಿರುತ್ತದೆ. ನೀರಿನಲ್ಲಿ ವಾಸಿಸುವ ಆಮೆಗಳಲ್ಲಿ ಎರಡು ವಿಧ ಇದೆ. 1. ಬಿಳಿ ಆಮೆ ತುಳು ಭಾಷೆಯಲ್ಲಿ ಬೊಲ್ಲೆವಿಮೆ ಎಂದೂ ಹೆಸರಿದೆ. ಎರಡನೆಯದು 'ಪಾಲೆವು' ಇದು ಸಹ ಆಮೆಯ ಹಾಗೆ ಇರುತ್ತದೆ. ಇದರಲ್ಲಿ ಎಲುಬಿನ ಪ್ರಮಾಣ ತುಂಬಾ ಕಡಿಮೆ. ಮಾಂಸವೇ ಅಧಿಕವಾಗಿದೆ. ಇವುಗಳು ನೀರಿನಲ್ಲಿಯೇ ವಾಸಿಸಿರುವುದರಿಂದ ತಿಪುಳು ಮಿಶ್ರಣವಿಟ್ಟಿರುವ ಏಡಿ ಮರಿಯನ್ನು ತಿನ್ನುತ್ತವೆ. ಆವಾಗ ಅದರ/ತಿಪುಳಿನ ವಿಷ ಏರಿ ತಡೆಯಲಾರದೆ ನೀರಿನ ಮೇಲೆ ಬಂದು ಹೊರಲಾಡುವ ಸಂದರ್ಭದಲ್ಲಿ ಮೀನು ಬೇಟೆಗಾರರಿಗೆ ಸಿಕ್ಕಿಹಾಕಿಕೊಳ್ಳುತ್ತವೆ. ಈ ಎರಡೂ ಜಾತಿಯ ಆಮೆಗಳು ಕಚ್ಚುವ ಪ್ರವೃತ್ತಿಯನ್ನು ಹೊಂದಿರುತ್ತವೆ. ಹಾಗಾಗಿ ಇವುಗಳನ್ನು ಹಿಡಿಯುವ ಸಂದರ್ಭದಲ್ಲಿ ತುಂಬಾ ಎಚ್ಚರವಹಿಸಬೇಕು.

ಈ ತಿಪುಳು ಕಾಯಿಯನ್ನು ಚಿಕ್ಕ ಮಕ್ಕಳಿಂದ ದೂರಿವಿರಿಸಿಕೊಂಡು ಎಚ್ಚರವಹಿಸಬೇಕು.

### 3.1.8 ಪಣೆತ ಕಾಯಿ (ಪಣೆಯ ಕಾಯಿ / ಪಣೆ ಮರದ ಕಾಯಿ)

ಪಣೆ ಮರವು ತಾಳೆ ಮರವನ್ನು ಹೋಲುತ್ತದೆ. ಆದರೆ ಅಷ್ಟು ಎತ್ತರವಾಗಿ ಬೆಳೆಯುವುದಿಲ್ಲ ಮತ್ತು ಬಾಳೆಗೊನೆಯ ಹಾಗೆ ಮಧ್ಯದಲ್ಲಿ ಗೊನೆಯ ಹಾಗೆ ಬಂದು ಹೂ ಬಿಡುತ್ತದೆ. ಆ ನಂತರ ಕಾಯಿಯಾಗುತ್ತದೆ. ಕಾಯಿ ಬಿಟ್ಟನಂತರ ಆ ಮರವು ಸಾಯುತ್ತದೆ. 'ಪಣೆ' ಮರದ ಗರಿಯು ಅಗಲವಾಗಿರುತ್ತದೆ ಮತ್ತು ಉದ್ದವಾದ ಕೈಯನ್ನು ಹೊಂದಿರುತ್ತದೆ. ಅಗಲವಾದ, ಗರಿಯನ್ನು ಹಿಂದಿನ ಕಾಲದಲ್ಲಿ ಮಳೆಗೆ ರಕ್ಷಣೆಗಾಗಿ 'ಕೆಡೆಂಜೋಲು' ಗೊರಬೆಯ ರೀತಿಯ ವಸ್ತುವನ್ನು ಹಗ್ಗ ಮಾತ್ರ ಬಳಸಿಕೊಂಡು ತಯಾರಿಸುತ್ತಿದ್ದರು.

**ಕಡು ಹಾಕುವ ವಿಧಾನ:**

ಬೆಳೆದಂತಹ ಪಣೆಮರದ ಕಾಯಿಯನ್ನು ಸುಡುತ್ತಾರೆ. ಆನಂತರ ಗುದ್ದಿ/ಜಜ್ಜಿ ಅದನ್ನು ಗೋಣಿ ಚೀಲದಲ್ಲಿ ಕಟ್ಟಿ ನೀರಿಗೆ ಹಾಕುತ್ತಾರೆ. ಸ್ವಲ್ಪ ಸಮಯದ ನಂತರ ಮೀನುಗಳು ಸಾಯಲಾರಂಭಿಸುತ್ತವೆ. ಇದನ್ನು/ಕಾಯಿಯನ್ನು ನಿಂತ ನೀರಿಗೆ ಹಾಕುತ್ತಾರೆ. ಹೆಚ್ಚು ವಿಷಕಾರಿ ಕಾಯಿಯಾಗಿರುವುದರಿಂದ ಅದರ ವಿಷದ ಪ್ರಮಾಣ ಕಡಿಮೆಯಾಗಲು ಗುಜ್ಜೆಯನ್ನು/ಹಲಸಿನ ಹಣ್ಣಿನ ಎಳೆ ಕಾಯಿಯನ್ನು ಕಡಿದು ನೀರಿಗೆ ಹಾಕುವುದರಿಂದ ವಿಷದ ಪ್ರಮಾಣ ಇಳಿಮುಖವಾಗತೊಡಗುತ್ತದೆ.

**ಸ್ವಚ್ಛಗೊಳಿಸುವ ವಿಧಾನ:**

ಮೀನನ್ನು ಸ್ವಚ್ಛಗೊಳಿಸುವ ಮೊದಲು 1ಕೆ.ಜಿ ಮೀನಿಗೆ 100 ಮಿ.ಲೀನಷ್ಟು ತೆಂಗಿನ ಎಣ್ಣೆಯಲ್ಲಿ ಹಾಕಿಡಬೇಕು ಮತ್ತು ಸ್ವಚ್ಛಗೊಳಿಸಿದ ನಂತರ ಉಪ್ಪು ಹಾಕಿಡಬೇಕು. ಈ ರೀತಿ ಮಾಡುವುದರಿಂದ ಕಾಯಿಯ ವಿಷಕಾರಿ ಅಂಶವು ಮೀನನ್ನು ಹೀರಿಕೊಳ್ಳುವುದಿಲ್ಲ.

**ಎಚ್ಚರಿಕೆ:** ಪಣೆ ಮರದ ಕಾಯಿಯು ಅತ್ಯಂತ ವಿಷಕಾರಿಯಾದುದು. ಇತ್ತೀಚಿನ ದಿನಗಳಲ್ಲಿ ಯಾರೂ ಈ ಕಾಯಿಯನ್ನು ಬಳಸಿ ಮೀನು ಹಿಡಿಯಲು ಪ್ರಯತ್ನಿಸುವುದಿಲ್ಲ. ಕಾರಣವೇನೆಂದರೆ ದನಕರುಗಳು ಕಡು/ವಿಷ ಹಾಕಿದ ಗುಂಡಿಗೆ ಇಳಿದರೆ /ನೀರು ಕುಡಿದರೆ ಕೋಡು, ಗೊರಸು ಕೊಳೆತು ಹೋಗುತ್ತದೆ. ಹಾಗಾಗಿ ಪ್ರಕೃತಿ ಸಹಜವಾದ ಕಾಯಿಯಾದರೂ ದನಕರುಗಳಿಗೆ ಅತ್ಯಂತ ಅಪಾಯಕಾರಿಯಾದ ಕಾಯಿಯಾಗಿರುವುದರಿಂದ ಈ ಕಾಯಿಗಳನ್ನು ಬಳಸುವುದಿಲ್ಲ.

### 3.1.9 ಇರೆ ಬೀಜ/ರಾಯಿ ಬೀಜ:

ರಾಯಿ ಬೀಜದ ಮರ ದೊಡ್ಡದಾಗಿ ಬೆಳೆಯುತ್ತದೆ. ಈ ಮರದ ಸೊಪ್ಪನ್ನು ದೊಡ್ಡ ಪಾತ್ರೆಯಲ್ಲಿ ಬೇಯಿಸುತ್ತಾರೆ. ಅದನ್ನು ನೀರಿಗೆ ಹಾಕುತ್ತಾರೆ. ನೀರಿಗೆ ಹಾಕಿದಾಗ ಅದರಿಂದ ನೊರೆ ಬರುತ್ತದೆ. ನೀರಿಗೆ ಹಾಕಿದಾಗ ಮೀನಿನ ಕಣ್ಣು ಒಡೆದು ಹೋಗುತ್ತದೆ. ಈ ಸೊಪ್ಪನ್ನು ನಿಂತಂತಹ ಸಿಹಿನೀರಿನ ಒಳಹರಿವು ಇಲ್ಲದ ಸ್ಥಳಕ್ಕೆ ಹಾಕುತ್ತಾರೆ.

### 3.1.10 ಕವಟೆ ಕಾಯಿ:

ಕವಟೆ ಕಾಯಿ ಮರವು ಮುಳ್ಳು ಜಾತಿಯ ಮರ. ಈ ಮರವು ಬುಡದಿಂದ ಆರಂಭಿಸಿ ಗೆಲ್ಲುಗಳಲ್ಲಿ ಮುಳ್ಳುಗಳಿರುತ್ತವೆ. ಈ ಮರದ ಮುಳ್ಳುಗಳು ಮೊಸಳೆಯ ಮೈಯಲ್ಲಿರುವ ಮುಳ್ಳನ್ನು ಹೋಲುತ್ತದೆ. ಈ ಮರದಲ್ಲಿ ಜನವರಿ ತಿಂಗಳಿನಿಂದ ಎಪ್ರಿಲ್ ತಿಂಗಳ ಅವಧಿಯೊಳಗೆ ಕಾಯಿಯಾಗುತ್ತದೆ. ಕಾಯಿಯು ಚಿಕ್ಕ ದ್ರಾಕ್ಷಿಯನ್ನು ಹೋಲುತ್ತದೆ ಮತ್ತು ಕಪ್ಪು ಬಣ್ಣದ್ದಾಗಿರುತ್ತದೆ. ಈ ಕಾಯಿಗಳನ್ನು ಗುದ್ದಿ ನೀರಿಗೆ ಹಾಕಿ ಮೀನು ಹಿಡಿಯುತ್ತಾರೆ.

### 3.1.11 ಅದೆಂಜಿ ಮರದ ಕೆತ್ತೆ/ಚಕ್ಕೆ:

ಕಾಡಿನಲ್ಲಿ ಅದೆಂಜಿ ಮರವನ್ನು ಕಾಣಬಹುದು. ಅದರ ಎಲೆಯು ಚಿಕ್ಕದಾಗಿದ್ದು ಭಾಜಿ ಮರವನ್ನು ಹೋಲುತ್ತದೆ. ಈ ಮರದ ಚಕ್ಕೆಯನ್ನು ಗುದ್ದಿ ಅದನ್ನು ಬೂದಿ ಮಿಶ್ರ ಮಾಡಿ ನೀರಿಗೆ ಹಾಕಿ ಮೀನು ಹಿಡಿಯುತ್ತಾರೆ. ಇದನ್ನು ಬಳಸುವುದರಿಂದ ಹರಿದು ಹೋಗುವ ನೀರಿಗೆ ವಿಷವನ್ನು ಬೆರಸದೆ ನೀರಿನ ಹರಿವು ನಿಂತಂತಹ ಸ್ಥಳಗಳಿಗೆ ಕಡು ಹಾಕಿ ಮೀನು ಹಿಡಿಯುತ್ತಾರೆ.

### 3.1.12 ಐರೋಳು ಕಂಡೆ/ಗೆಡ್ಡೆ

ಕಾಡಿನಲ್ಲಿ ಒಂದು ಎಲೆಗೆ ಮೂರು ಕಾವಲುಗಳಿರುವ ಐರೋಳು ಬಳ್ಳಿ ಕಾಣಸಿಗುತ್ತದೆ. ಮಳೆಗಾಲ ಕಳೆದು ಬಳ್ಳಿ ಒಣಗುವ ಮೊದಲು ಆ ಬಳ್ಳಿಯ ಬುಡವನ್ನು ಅಗೆಯುತ್ತಾರೆ. ಒಂದೇ ಬಳ್ಳಿಯ ಬುಡದಲ್ಲಿ ಸುಮಾರು ಮೂರರಿಂದ 4ಕೆ.ಜಿ ತೂಕವಿರುವ ಗೆಡ್ಡೆ ದೊರೆಯುತ್ತದೆ. ಈ ಗೆಡ್ಡಯನ್ನು ಅಗೆದು ತೆಗೆದು ನೀರಿನ ಒಳ ಹರಿಯುವಿಕೆ ಇಲ್ಲದ ನದಿ, ತೋಡಗಳಲ್ಲಿ ಮೀನಿರುವ ನೀರಿನ ಗುಂಡಿಗಳಿಗೆ

ಕತ್ತಿಯ ಬೆನ್ನಿನ ಭಾಗದಿಂದ ಜಜ್ಜಿ ನೀರಿಗೆ ಹಾಕುತ್ತಾರೆ. ನೀರಿಗೆ ಹಾಕಿ ಆ ನಂತರ ನೀರನ್ನು ಕದಡಬೇಕು. ಅರ್ಧ ಗಂಟೆ ನಂತರ ಮೀನುಗಳು ಸಾಯಲಾರಂಭಿಸುತ್ತವೆ. ಈ ಗೆಡ್ಡೆಯನ್ನು ನೀರಿಗೆ ಹಾಕುವುದರಿಂದ 'ಮುಗುಡು'ಜಾತಿಯ ಮೀನುಗಳಿಗೆ ಇದು ರಾಮಬಾಣ ಇದ್ದ ಹಾಗೆ ಈ ಜಾತಿಯ ಮೀನುಗಳು ಬೇಗ ಸಾಯುತ್ತವೆ. ಪುತ್ತೂರು ತಾಲೂಕಿನ ಕಡಲು ಪ್ರದೇಶಗಳಲ್ಲಿ ಈ ವಸ್ತುವನ್ನು ಬಳಸಿ ಮೀನು ಹಿಡಿಯುತ್ತಾರೆ.

**3.1.13 ನೊರೆಕಾಯಿ:**

ತುಳು ಭಾಷೆಯಲ್ಲಿ ನೊರೆ ಕಾಯಿಗೆ ನರ್ರೊವಲು ಎಂದು ಕರೆಯುತ್ತಾರೆ. ನೊರೆ ಕಾಯಿಯು ಬಹುಪಯೋಗಿ ವಸ್ತು, ಬಟ್ಟೆ ತೊಳೆಯಲು, ಆಭರಣ ತೊಳೆಯುವುದಕ್ಕಾಗಿ ಸಾಬೂನು ತಯಾರಿಕೆಯಲ್ಲಿಯೂ ಹಾಗೂ ಮೀನು ಬೇಟೆಗಾರಿಕೆಯಲ್ಲಿಯೂ ಬಳಸುತ್ತಾರೆ. ನೊರೆಕಾಯಿಯು ಮರಗಳಲ್ಲಿ ಗೊಂಚಲು ಗೊಂಚಲಾಗಿ ಬೆಳೆಯುತ್ತದೆ. ಉದುರಿದ ಕಾಯಿಗಳನ್ನು ಕಡವೆ, ಕಾಡುಕುರಿ, ಜಿಂಕೆಗಳು ತಿನ್ನುತ್ತವೆ.

**ಮೀನು ಬೇಟೆಗಾರಿಕೆ ವಿಧಾನ:**

ಒಣಗಿಸಿದ ಅಥವಾ ಹಸಿ ನೊರೆಕಾಯಿಯನ್ನು ತಂದು ಚೆನ್ನಾಗಿ ಜಜ್ಜುತ್ತಾರೆ. ಪೂರ್ವ ನಿರ್ಧಾರಿತದಂತೆ ಒಳಹರಿವು ಇಲ್ಲದ ಮೀನಿರುವ ಗುಂಡಿಗಳಿಗೆ ಜಜ್ಜಿರುವ ನೊರೆ ಕಾಯಿಯನ್ನು ಮಂಕರಿಯಲ್ಲಿಟ್ಟು ನೀರಿನಲ್ಲಿ ಅದ್ದಿ ಮೇಲಕ್ಕೆತ್ತುತ್ತಾರೆ. ಹೀಗೆ ನಾಲ್ಕೈದು ಬಾರಿ ಹೀಗೆ ಮಾಡಿ ಆನಂತರ ಎಲ್ಲಾ ನೊರೆಕಾಯಿಯನ್ನು ನೀರಿಗೆ ಹಾಕಿ ಕದಡುತ್ತಾರೆ. ಕದಡಿದಾಗ ನೀರಿನಲ್ಲಿ ನೊರೆ ಬರಲು ಆರಂಭವಾಗುತ್ತದೆ. ಗುಂಡಿಯಲ್ಲಿರುವ ನೀರಿನ ಪ್ರಮಾಣವನ್ನು ಅನುಸರಿಸಿಕೊಂಡು ನೊರೆಕಾಯಿಯನ್ನು ಬಳಸುತ್ತಾರೆ. 20 ನಿಮಿಷ ಕಳೆದ ನಂತರ ಮೀನುಗಳು ನೊರೆಕಾಯಿಯ ಉರಿಯನ್ನು ತಾಳಲಾರದೆ ಸಾಯಲಾರಂಭಿಸುತ್ತವೆ. ಈ ವಿಧಾನದಲ್ಲಿ ತರು, ಸೀರ್ಕೊಟೆ, ಬಾಲೆ ಮೀನುಗಳು ದೊರೆಯುತ್ತವೆ.

## 3.2 ಆಧುನಿಕ ವಿಧಾನ

ನಾಗರಿಕತೆ ಬೆಳೆದ ಹಾಗೆ ಮನುಷ್ಯನ ಯೋಚನಾಲಹರಿ ವಿಭಿನ್ನವಾಗುತ್ತ ಹೋಗುತ್ತದೆ. ಪ್ರಗತಿಯ ನೆಪದಲ್ಲಿ ಬಳಸುತ್ತಿರುವ ವಸ್ತುಗಳನ್ನು ಅವುಗಳ ಬಹು ಉಪಯೋಗದ ಕುರಿತಂತೆ ಯೋಚಿಸಲು ತೊಡಗಿದ. ಈ ಮಾತು ತುಳುನಾಡಿನ ಮೀನು ಬೇಟೆಗಾರಿಕೆಗೂ ಹೊರತಾದುದಲ್ಲ. ಹಿಂದಿನ ಕಾಲದಲ್ಲಿ ತನಗೆ ಎಷ್ಟು ಬೇಕು ಅಷ್ಟೇ ಮೀನು ಹಿಡಿದುಕೊಂಡು ನೆಮ್ಮದಿಯ ನಿಟ್ಟುಸಿರು ಬಿಡುತ್ತಿದ್ದರು. ಆದರೆ ಇಂದು ಸ್ವಾರ್ಥದಿಂದ ಉಪಯೋಗಕ್ಕಿಂತ ಹೆಚ್ಚಾಗಿ ದುಂದುವೆಚ್ಚ ಮಾಡುತ್ತಾ ಬಂದಿದ್ದಾನೆ. ತನ್ನ ಮನೆಯ ರಕ್ಷಣೆಗಾಗಿ ಔಷಧಿಯ ನೆಪದಲ್ಲಿ ತರುತ್ತಿದ್ದ ಕೆಲವೊಂದು ವಸ್ತುಗಳನ್ನು ಆತ ಮೀನಿಗಾಗಿ ವಿಷವಾಗಿ ಪರಿವರ್ತಿಸತೊಡಗಿದ್ದಾನೆ. ಆರೋಗ್ಯ ಸಮಸ್ಯೆಗಳು ಸೃಷ್ಟಿಯಾಗುತ್ತದೆ ಅನ್ನುವ

ಕಿಂಚಿತ್ತೂ ಪರಿವೆ ಇಲ್ಲದೆ ಮೈಲುತುತ್ತು, ಎಂಡೋಸಲ್ಫಾನ್, ಸುಣ್ಣ(ವೆಲ್ಪಿಂಗ್) ಇವುಗಳನ್ನು ಮೀನಿಗೆ ವಿಷವಾಗಿ ಬಳಸುತ್ತಾನೆ. ಇದರಿಂದ ಬರೀ ಮೀನುಗಳು ಮಾತ್ರ ನಿರ್ನಾಮವಾಗುವುದಿಲ್ಲ. ನೀರಿನಲ್ಲಿರುವ ಪ್ರತಿಯೊಂದು ಜೀವಿಯು ಸಂಪೂರ್ಣ ನಾಶವಾಗುತ್ತದೆ. ಮನುಷ್ಯನ ಸ್ವಾರ್ಥ ಯಾವಾಗ ಜಾಸ್ತಿಯಾಯಿತೋ ಆಗ ಅಲ್ಲಿ ವಿನಾಶವು ಜಾಸ್ತಿಯಾಗತೊಡಗಿತು. ಈ ಆಧುನಿಕ ವಿಧಾನದಲ್ಲಿ ಪ್ರಾಣಕ್ಕೂ ಸಹ ಕುತ್ತು ತರುತ್ತಿದ್ದಾನೆ. ಪ್ರಸ್ತುತ ದಿನಗಳಲ್ಲಿ ಅತ್ಯಂತ ವಿಷಕಾರಿ ಮತ್ತು ಪ್ರಾಣಹಾನಿ ತರುವ ಎರಡು ವಸ್ತುಗಳೆಂದರೆ ಪೆರಡಾನ್ ಮತ್ತು ಎಂಡೋಸಲ್ಫಾನ್. ಈ ಎರಡೂ ವಸ್ತುಗಳನ್ನು ಬಳಸಿಕೊಂಡು ಮೀನು ಹಿಡಿಯುತ್ತಿರುವುದು ಮತ್ತು ನಾಶಮಾಡುತ್ತಿರುವುದು ಅತ್ಯಂತ ಖೇದಕರ ಸಂಗತಿ. ಆದರೂ ಸಿಹಿನೀರಿನ ಮೀನು ಬೇಟೆಗಾರಿಕೆ ಅನ್ನುವ ವಿಷಯದಲ್ಲಿ ಅವುಗಳನ್ನು ಉಲ್ಲೇಖಿಸುವುದು ಅಧ್ಯಯನದ ಸೃಷ್ಟಿಯಿಂದ ಮಾತ್ರ ಮುಖ್ಯವೆನಿಸುತ್ತದೆ. ಮತ್ತು ಅದರ ಸಾಧಕಬಾಧಕಗಳನ್ನು ಕೂಡ ದಾಖಲಿಸಲಾಗುತ್ತದೆ.

**3.2.1 ಪೆರಡಾಕ್ಸ್/ಪೆರಡಾನ್ ಮತ್ತು ಎಂಡೋಸಲ್ಫಾನ್**

ಕೃಷಿಕ ತನ್ನ ಬೆಳೆರಕ್ಷಣೆಗೆಂದು ಪೆರಡಾಕ್ಸ್, ಎಂಡೋಸಲ್ಫಾನ್‌ಗಳನ್ನು ತರುತ್ತಿದ್ದ. ಅವುಗಳನ್ನು ಬೆಳೆಗಳಿಗೆ ಸಿಂಪರಣೆ ಮಾಡುತ್ತಿದ್ದ. ಮಿಕ್ಕವುಗಳನ್ನು ಆತ ಹಾಗೆ ಜಾಗರೂಕವಾಗಿ ಇಡಲಾರಂಭಿಸಿದ. ಬೆಳೆಗಳಿಗೆ ಬಳಸುವಾಗ ತೋಟಗಳಲ್ಲಿರುವ ಕೆರೆ, ತೋಡುಗಳಲ್ಲಿದ್ದ ಮೀನುಗಳು ಇದರ ಕೆಲವೊಂದು ಹನಿ ಬಿದ್ದು ಸಾಯಲಾರಂಭಿಸಿದವು. ಇದನ್ನರಿತ ರೈತ ಇದನ್ನು ಬಳಸಿಯೂ ಮೀನು ಹಿಡಿಯಬಹುದೆಂದು ಕಂಡುಕೊಂಡ ವಾಸ್ತವ ಅಂಶ. ಆನಂತರ ಔಷಧದ ಹಿನ್ನಲೆಯಿಂದ ತಂದಂತಹ ಪೆರಡಾಕ್ಸ್, ಎಂಡೋಸಲ್ಫಾನ್‌ಗಳಲ್ಲಿ ಉಳಿದವುಗಳನ್ನು ನೀರಿಗೆ ಹಾಕಿ ಮೀನು ಹಿಡಿಯುವುದನ್ನೂ ರೂಢಿಸಿಕೊಂಡ.

**ಮೀನು ಹಿಡಿಯುವ ವಿಧಾನ:**

ಹರಿಯುವಂತಹ ನೀರಿಗೆ ಸ್ವಲ್ಪ ಅಂದರೆ ಹೆಚ್ಚೆಂದರೆ 100 ಎಂ.ಎಲ್‌ನಷ್ಟು ನೀರು ಹರಿಯುವ ಮೇಲ್ಭಾಗದಲ್ಲಿ ಸುರಿಯುತ್ತಾರೆ. ನಂತರ ಅರ್ಧ ಅಥವಾ ಒಂದು ಗಂಟೆಯ ಸಮಯದಲ್ಲಿ ಯಾವ ಗುಂಡಿಗೆ ಕೀಟನಾಶಕ/ಕ್ರಿಮಿನಾಶಕವನ್ನು ಸುರಿಯಲಾಗಿತ್ತೋ ಅಲ್ಲಿ ಮೀನು ಸಾಯಲು ಆರಂಭವಾಗುತ್ತವೆ. ಸಣ್ಣ ಮೀನುಗಳು ತಕ್ಷಣ ಸಾಯುತ್ತವೆ. ದೊಡ್ಡ ಮೀನುಗಳು ಸ್ವಲ್ಪ ಸಮಯದ ನಂತರ ಸಾಯಲು ಆರಂಭವಾಗುತ್ತದೆ. ಮೇಲೆ ಉಲ್ಲೇಖಿಸಿದ ಎರಡೂ ಕೀಟನಾಶಕಗಳು ಒಂದು ರೀತಿಯ ವಿಷಕಾರೀ ಪರಿಣಾಮ ಹೊಂದಿದವುಗಳು. ಆದುದರಿಂದ ಅದೇ ರೀತಿಯಾಗಿ ಮೀನುಗಳು ಸಾಯಲಾರಂಭಿಸುತ್ತವೆ.

ದಕ್ಷಿಣ ಕನ್ನಡ ಜಿಲ್ಲೆಯ ಎಂಡೋಪೀಡಿತ ಪ್ರದೇಶಗಳಾದ ಬೆಳ್ತಂಗಡಿ ತಾಲೂಕಿನ ಕೊಕ್ಕಡ, ಪಟ್ರಮೆ, ಪುತ್ತೂರು ತಾಲೂಕಿನ ಕುಂತೂರು, ಅಲಂಕಾರು ಗ್ರಾಮಗಳಲ್ಲಿ ಈ ರೀತಿಯಾಗಿ ಮೀನು ಹಿಡಿದಂತಹ ನಿದರ್ಶನಗಳು ಇವೆ. ಸುಮಾರು 25 ವರ್ಷಗಳ ಹಿಂದೆ ಗೇರುಬೀಜ/ಗೋಡಂಬಿ

ಮರಗಳಿಗೆ ಹೆಲಿಕಾಪ್ಟರ್ ಮೂಲಕ ಎಂಡೋಸಲ್ಫಾನ್ ಸಿಂಪರಣೆ ಮಾಡಿದ ಸಂದರ್ಭದಲ್ಲಿ ಎಂಡೋಸಲ್ಫಾನ್ ಸಿಂಪರಣೆ ಮಾಡಿದ ಗೇರುಮರದ ಅಡಿಯಿಂದ ಮಣ್ಣನ್ನು ಅಗೆದು ತೆಗೆದು ಮೀನಿರುವ ಗುಂಡಿಗಳಿಗೆ ಹಾಕಿ ಮೀನು ಹಿಡಿದ ಉಲ್ಲೇಖಗಳು ಸಿಗುತ್ತವೆ.

ಆದರೆ ಇಂತಹ ಸಂದರ್ಭಗಳಲ್ಲಿ ಯಥೇಚ್ಛವಾಗಿ ಮೀನುಗಳು ಸತ್ತು ಅದನ್ನು ತಿಂದಂತಹ ಪಕ್ಷಿ ಪ್ರಾಣಿಗಳು ಅಸ್ವಸ್ಥಗೊಂಡ ಸನ್ನಿವೇಶಗಳೂ ಇವೆ. ಕೊಕ್ಕರೆ, ಗಿಡುಗಗಳೂ ಸತ್ತು ಹೋಗಿವೆಯಂತೆ ಎಂದು ಮಾಹಿತಿದಾರರೊಬ್ಬರು ಮಾಹಿತಿ ನೀಡಿರುತ್ತಾರೆ.

ಕಡುಪಿರಿ/ಕಡುಬಿರಿಯು/ಕಡು ಹಾಕಿದ ವಿಷ ಕಡಿಮೆಯಾಗಲು ಅನೇಕ ವಿಧಾನಗಳಿವೆ. ಆಧುನಿಕ ರೀತಿಯ ಕಡು ಹಾಕುವುದರಿಂದ ಮೀನುಗಳ ಮಾರಣ ಹೋಮ ಆಗುವ ಸಂಭವ ಹೆಚ್ಚಿರುತ್ತದೆ. ತನ್ನ ಸ್ವಾರ್ಥಕ್ಕಾಗಿ ನೀರಿಗೆ ವಿಷವನ್ನು ಬೆರೆಸಿದರೂ ಆಳವಾದ ಗುಂಡಿಗಳಲ್ಲಿರುವ ಬೃಹತ್ ಆಕಾರದ ಪೆರುವೋಲು (ಮಹಾಷಿರ್)ಮೀನುಗಳು ವಿಷದ ತೀವ್ರತೆ ತಡೆಯಲಾರದೆ ಬಾಯಿ ಅಗಲಿಸಿ ವಿಚಿತ್ರವಾಗಿ ಸದ್ದುಮಾಡಿಕೊಂಡು ನೀರಿನ ಮೇಲ್ಭಾಗಕ್ಕೆ ದಡಕ್ಕೆ ಬರುವಾಗ ಎಂತಹವರ ಕಲ್ಲು ಹೃದಯವು ಕರಗಿ ಹೋಗುತ್ತದೆ. ಆ ವಿಷದ ತೀವ್ರತೆ ಆ ರೀತಿ ಇರುತ್ತದೆ. ಇಂತಹ ಸಂದರ್ಭದಲ್ಲಿ ವಿಷದ ತೀವ್ರತೆ ಕಡಿಮೆಯಾಗುವುದಕ್ಕಾಗಿ ನೀರಿಗೆ ತೆಂಗಿನೆಣ್ಣೆ, ಹಲಸಿನ ಕಾಯಿ, ಚಿಕ್ಕ ಗಾತ್ರದ ಎಳೆಯ ಹಲಸಿನ ಕಾಯಿ, ಬಾಳದಂಟು ಕಡಿದು ಹಾಕುತ್ತಾರೆ. ಈ ರೀತಿ ಹಾಕಿದ ಕೆಲವು ಸಮಯದ ನಂತರ ಮೀನುಗಳು ಮೇಲೆ ಸದ್ದು ಮಾಡಿಕೊಂಡು ಬರುವ ಪ್ರಮೇಯ ಕಡಿಮೆಯಾಗುತ್ತದೆ. ಈ ವಿಧಾನದಲ್ಲಿಯೂ ಜನರು ನೀರಿಗೆ ಹಾಕಿದಂತಹ ವಿಷದ ಪ್ರಮಾಣ/ತೀವ್ರತೆ ಕಡಿಮೆ ಮಾಡಲು ಪ್ರಯತ್ನಿಸುತ್ತಾರೆ.

ಪೆರಡಾಕ್ಸ್/ಪೆರಡಾನ್, ಎಂಡೋಸಲ್ಫಾನ್‌ಗಳನ್ನು ಯಾವುದೇ ಕಾರಣಕ್ಕೂ ನೀರಿಗೆ ಮೀನಿಗಾಗಿ ಹಾಕುವುದನ್ನು ನಿಲ್ಲಿಸಬೇಕು. ಕಾರಣ ಇಷ್ಟೆ ಸಾಂಪ್ರಾದಾಯಿಕ ವಿಧಾನದಲ್ಲಿ ಕಡು ಹಾಕಿದರೆ ನೀರಿನ ಅಡಿಯಲ್ಲಿರುವ ಚಿಕ್ಕ ಚಿಕ್ಕ ಜೀವಿಗಳು, ಎರೆಹುಳಗಳು, ಕಪ್ಪೆಗಳು, ನೀರುಹಾವುಗಳು ಸಾಯುವುದಿಲ್ಲ. ಆದರೆ ಈ ಮೇಲೆ ಉಲ್ಲೇಖಿಸಿದ ಎರಡೂ ದ್ರಾವಣ ಹಾಕಿದಂತಹ ಅಷ್ಟು ಜಾಗದ ನೀರಿನಲ್ಲಿ ಒಂದು ಕ್ರಿಮಿಯು ಉಳಿಯಲು ಸಾಧ್ಯವಾಗುವುದಿಲ್ಲ, ಈ ನಿಟ್ಟಿನಲ್ಲಿ ಈ ವಿಧಾನದ ಕುರಿತು ಎಚ್ಚರಿಕೆ ನೀಡಬೇಕು ಮತ್ತು ಅದನ್ನು ಈಗಾಗಲೇ ನಿಷೇಧಿಸಲಾಗಿದೆ.

### 3.2.2 ಮೈಲು ತುತ್ತು ಹಾಕುವುದು

ಅಡಿಕೆ ತೋಟದ ಕೊಳೆರೋಗ ನಿಯಂತ್ರಣಕ್ಕೆ ಮೈಲುತುತ್ತನ್ನು ಸುಣ್ಣದ ಜೊತೆಗೆ ಬೆರೆಸಿ ಬಳಸುತ್ತಾರೆ. ಈ ವಸ್ತುವನ್ನು ರೈತ ಒಂದು ಕಡೆ ಔಷಧವಾಗಿ ಬಳಕೆ ಮಾಡಿದರೆ ಮತ್ತೊಂದೆಡೆಯಲ್ಲಿ ಮೀನು ಹಿಡಿಯಲು ಬಳಸುತ್ತಾರೆ. ಇದನ್ನು ಹೆಚ್ಚಾಗಿ ಹರಿಯುವ ನೀರಿನಲ್ಲಿ ಬಳಸುತ್ತಾರೆ. ನೀರು ಹರಿಯುವ ಮೇಲ್ಭಾಗದಲ್ಲಿ ಒಂದು ಬಟ್ಟೆಯಲ್ಲಿ ನದಿ, ತೋಡುಗಳಲ್ಲಿ ನೀರಿನ ಪ್ರಮಾಣ ಮೀನಿನ

ಸಂಖ್ಯೆಗೆ ಅನುಗುಣವಾಗಿ ಮೈಲುತುತ್ತನ್ನು ಕಟ್ಟುತ್ತಾರೆ. ಕೆಳಭಾಗದಲ್ಲಿ ಕೂರಿಯನ್ನು ಇಡುತ್ತಾರೆ. ಮೈಲುತುತ್ತಿನ ವಿಷದ ತೀವ್ರತೆ ಇರುವವರೆಗೆ ಮೀನುಗಳು ಅಡ್ಡಾದಿಡ್ಡಿ ಓಡಾಡುತ್ತವೆ. ಹಾಗೆ ಓಡುವಾಗ ಅಡ್ಡಲಾಗಿ ಬಿಟ್ಟಂತಹ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ. ಮತ್ತೆ ಕೆಲವು ಮೀನುಗಳು ಇಳಿಯಲು ಪ್ರಯತ್ನಿಸಿ ಕೂರಿಯೊಳಗೆ ಸಿಕ್ಕಿಹಾಕಿಕೊಳ್ಳುತ್ತವೆ. ಈ ರೀತಿಯ ಮಿಶ್ರಣವನ್ನು ಹಾಕುವುದರಿಂದ ಕೆಲವೊಂದು ಮೀನುಗಳ ಕಣ್ಣು ನೀಲಿಬಣ್ಣ/ಬಿಳಿಬಣ್ಣಕ್ಕೆ ತಿರುಗುತ್ತದೆ. ಮುಖ್ಯವಾಗಿ ಸಿಗಡಿ, ಏಡಿ ಕಯ್ಪೆತರು/ಕಾಜೋವು, ರೆಪ್ಪೆ, ಕೊಂತಿ, ಅಬ್ರೋನಿ ಮುಂತಾದ ಮೀನುಗಳು ಸತ್ತು ಹೋಗುತ್ತವೆ. ನೀರಿನ ಹರಿವನ್ನು ಕಟ್ಟಿ ಹಾಕಿ ಕಡು ಹಾಕಿದಂತಹ ಗುಂಡಿಗಳಲ್ಲಿ ಕಾಜೋವು ಅಥವಾ ಕೈಯ್ಪೆತರು ಮೀನುಗಳು ಸಾಯದಿದ್ದಾಗ ಅಂತಹ ಸಂದರ್ಭದಲ್ಲಿ ಈ ಮೈಲು ತುತ್ತನ್ನು ಬಳಸುತ್ತಾರೆ.

### 3.2.3 ಗ್ಯಾಸ್‌ವೆಲ್ಡಿಂಗ್ ಸುಣ್ಣ ಬಳಕೆ

ಮೀನು ಹಿಡಿಯಲು ಗ್ಯಾಸ್‌ವೆಲ್ಡಿಂಗ್‌ಗಳಲ್ಲಿ ಬಳಕೆಯಾದ ಸುಣ್ಣವನ್ನು ಬಳಸುತ್ತಾರೆ ನಿಂತಂತಹ/ನಿಂತಿರುವ ನೀರಿನಲ್ಲಿ ಅಂದರೆ ಹರಿವ ನೀರನ್ನು ಕಟ್ಟಿ ಕಡು ಹಾಕುವ ಜಾಗಕ್ಕೆ ನೀರು ಒಳ ಹರಿಯದ ಹಾಗೆ ಮಾಡಿ ಅದಕ್ಕೆ ಗ್ಯಾಸ್ ವೆಲ್ಡಿಂಗ್‌ನ ಸುಣ್ಣವನ್ನು ಬಳಸುತ್ತಾರೆ. ಸುಣ್ಣ ಹಾಕಿ ಇಡೀ ನೀರನ್ನು ಕದಡುತ್ತಾರೆ. ಈ ಸುಣ್ಣದ ಖಾರಕ್ಕೆ ಮೀನುಗಳು ಸಾಯುತ್ತವೆ.

ಆಧುನಿಕ ರೀತಿಯಲ್ಲಿ ಕಡು ಹಾಕುವ ಸಂದರ್ಭದಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಮೀನುಗಳು ಹಾಳಾಗುವುದು ಬಹಳ ಬೇಗ. ಅಂದರೆ ರಾಸಾಯನಿಕ ಅಂಶಗಳು ಮೀನಿನ ದೇಹವನ್ನು ಸೇರುವುದರಿಂದ ಮೀನುಗಳನ್ನು ಆದಷ್ಟು ಬೇಗ ರಿಪೇರಿ/ಶುಚಿಗೊಳಿಸಿ ಸಾಂಬಾರು ಮಾಡುತ್ತಾರೆ. ಎಂಡೋಸಲ್ಫಾನ್‌ನಂತಹ ವಿಷಕಾರಿ ಅಂಶಗಳು ದೇಹವನ್ನು ಸೇರಿದಾಗ ಹಾನಿಕಾರಕ ಆಗುವುದಿಲ್ಲವೇ? ಎಂದು ಮಾಹಿತಿದಾರರಲ್ಲಿ ಪ್ರಶ್ನಿಸಿದಾಗ ಅವರು ಹೀಗೆ ಹೇಳುತ್ತಾರೆ ಬೇಯಿಸಿದಾಗ ಅದರಲ್ಲಿರುವ ಎಲ್ಲಾ ವಿಷಕಾರಿ ಅಂಶಗಳು ನಾಶವಾಗುತ್ತವೆ ಎಂದು. ಆದರೆ ಅದರ ಸತ್ಯಾಸತ್ಯತೆಯ ಕುರಿತಂತೆ ವೈಜ್ಞಾನಿಕವಾಗಿ ಪರೀಕ್ಷಿಸಿದಾಗ ಮಾತ್ರ ತಿಳಿಯುತ್ತದೆ.

**ಪಾರಂಪರಿಕ ಮತ್ತು ಆಧುನಿಕ ವಿಧಾನಕ್ಕಿರುವ ವ್ಯತ್ಯಾಸ:**

ಪಾರಂಪರಿಕ ವಿಧಾನದ ಮೂಲಕ ಕಡು ಹಾಕಿದ ಸಂದರ್ಭದಲ್ಲಿ ಅದರ ವಿಷಕಾರಿ ಅಂಶಗಳು ನೀರಿನ ಮೇಲ್ಗಡೆಯಲ್ಲಿ ಮಾತ್ರ ಇರುತ್ತವೆ. ನೀರನ್ನು ಕದಡಿದ ಸಂದರ್ಭದಲ್ಲಿ ಮಾತ್ರ ವಿಷಕಾರಿ ಅಂಶಗಳು ನೀರಿನ ಆಳವನ್ನು ಸೇರಿಕೊಳ್ಳುತ್ತವೆ. ಇದರಿಂದ ಆಳದಲ್ಲಿರುವ ಮೀನುಗಳು ಸಾಯುತ್ತವೆ. ಆದರೆ ಆಧುನಿಕ ಪದ್ಧತಿ/ವಿಧಾನದಲ್ಲಿ ಬಳಸುವ ಎಲ್ಲಾ ರಾಸಾಯನಿಕ ವಸ್ತುಗಳ ಹರಿವು ನೀರಿನ ತಳಮಟ್ಟದಲ್ಲಿ ಸಾಗುತ್ತವೆ. ಹಾಗಾಗಿ ನೀರಿನಲ್ಲಿರುವ ಮೀನು ಸೇರಿದಂತೆ ಎಲ್ಲಾ ಜಲಚರಗಳು ತೀವ್ರ ತರವಾದ ಹಾನಿಗೆ ಒಳಗಾಗುತ್ತವೆ ಮತ್ತು ಸಾಯುತ್ತವೆ.

## ಅಧ್ಯಾಯ–4

# ವಸ್ತುಪರಿಕರಗಳ ಬಳಕೆ

ಅಧ್ಯಾಯ-4

# ವಸ್ತುಪರಿಕರಗಳ ಬಳಕೆ

ಸಿಹಿನೀರಿನ ಮೀನು ಬೇಟೆಗಾರಿಕೆಯಲ್ಲಿ ವಸ್ತು ಪರಿಕರಗಳ ಬಳಕೆ ಅತ್ಯಂತ ಮಹತ್ವದ್ದು. ಪ್ರತಿಯೊಂದು ವಸ್ತುಪರಿಕರಗಳ ಮೂಲಕ ಮೀನುಗಳನ್ನು ಮನುಷ್ಯ ತನ್ನ ಜಾಣ್ಮೆಯಿಂದ ಖೆಡ್ಡಕ್ಕೆ ಬೀಳಿಸುವಂತಹ ಸನ್ನಿವೇಶಗಳನ್ನು ಕಾಣಬಹುದು. ಅತೀ ಬುದ್ಧಿವಂತ ಪ್ರಾಣಿಯಾದ ಮನುಷ್ಯ ತನ್ನ ತಂತ್ರ ಮತ್ತು ಸೃಜನಶೀಲತೆಯನ್ನು ಸಿಹಿಮೀನು ಬೇಟೆಗಾರಿಕೆಯಲ್ಲಿ ಪ್ರಯೋಗಿಸುತ್ತಾನೆ. ಮನುಷ್ಯನ ತಂತ್ರಗಳು, ಕುತಂತ್ರಗಳು ಜಲಚರವಾಗಿರುವಂತಹ ಮೀನುಗಳಿಗೆ ಅರ್ಥವಾಗದೆ ಆತನ ತಂತ್ರದ ಪರಿಕರಗಳಿಗೆ ಸಿಲುಕಿ ಆಹಾರವಾಗುತ್ತವೆ. ಔಪಚಾರಿಕ ಶಿಕ್ಷಣ ಪಡೆಯದಂತಹ ಜನಪದರು ಪ್ರಕೃತಿಯಲ್ಲಿರುವ ಪ್ರತಿಯೊಂದು ವಸ್ತುವನ್ನು ಬಹು ಹತ್ತಿರದಿಂದ ವೀಕ್ಷಿಸಿದವರು ಮತ್ತು ಅದರ ಉಪಯೋಗವನ್ನು ಅರಿತುಕೊಂಡವರು ವಸ್ತುವಿನ ಸಾಧಕ ಬಾಧಕಗಳನ್ನು ಕಂಡುಕೊಂಡವರು. ಸಿಹಿನೀರು ಮೀನು ಬೇಟೆಗಾರಿಕೆಯಲ್ಲಿ ವಸ್ತು ಪರಿಕರಗಳನ್ನು ಕೆಲವೊಂದು ಪ್ರಕೃತಿ ಸಹಜವಾಗಿದ್ದರೆ ಕೆಲವೊಂದು ವಸ್ತುಗಳನ್ನು ಪ್ರಕೃತಿಯಲ್ಲಿ ಸಿಕ್ಕುವಂತಹ ಕಚ್ಚಾವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ ಪರಿವರ್ತಿಸಿ ಮೀನುಗಳನ್ನು ಹಿಡಿಯುತ್ತಾನೆ. ಕೆಲವೊಂದು ವಸ್ತುಗಳು ಸರ್ವ ಋತುಗಳಲ್ಲಿ ಬಳಕೆಯಾದರೆ ಕೆಲವೊಂದು ವಸ್ತುಗಳು ಕೆಲವೊಂದು ಋತುಗಳಲ್ಲಿ ಮಾತ್ರ ಬಳಸಿ ಮೀನುಗಳನ್ನು ಹಿಡಿಯುತ್ತಾನೆ. ವಸ್ತು ಪರಿಕರಗಳ ಬಳಕೆಯಲ್ಲಿ ಪ್ರಮುಖವಾಗಿ ಮಂಕರಿ, ಕೂರಿ, ಕಾಂಡೇರಿ, ಕೋಜೊಲು, ಏಪೆ/ಏಂಪೆ, ಬಲೆ, ಬಟ್ಟಲು, ಒಣ ಅಡಿಕೆ ಮರ, ಟೊಳ್ಳು ಮರ, ಬಿದಿರು ಇತ್ಯಾದಿ. ಈ ಪರಿಕರಗಳನ್ನು ಬಳಸಿಕೊಂಡು ಮೀನು ಹಿಡಿಯುವ ರೀತಿಯನ್ನು ಈ ಕೆಳಕಂಡಂತೆ ವಿವರವಾಗಿ ನೀಡಲಾಗಿದೆ.

## 4.1 ಮಂಕರಿ

ತುಳುಭಾಷೆಯಲ್ಲಿ ಈ ವಸ್ತುವಿಗೆ 'ಮಕ್ಕೆರಿ' ಎಂದು ಕರೆಯುತ್ತಾರೆ. ಈ ವಸ್ತುವನ್ನು ಬಹುಪಯೋಗಿಯಾಗಿ ಬಳಸಿ ಮೀನು ಹಿಡಿಯುತ್ತಾರೆ. ಮಂಕರಿಯನ್ನು ಬಿದಿರು, ಬಿದಿರಿನ ಚಿಕ್ಕ ತಳಿ ಓಟೆ ಮತ್ತು ಕಾಡಿನಲ್ಲಿ ದೊರೆಯುವ ಬಳ್ಳಿಯಾದ ಮಾದೆರ್ ಅಥವಾ ಎಂಜಿರ್ ಬಳ್ಳಿಯನ್ನು ಬಳಸಿಕೊಂಡು ತಯಾರಿಸುತ್ತಾರೆ. ಇಂಗ್ಲಿಷ್ ಭಾಷೆಯ ಕ್ಯಾಪಿಟಲ್ 'ಯು' ಅಕ್ಷರದ ಸ್ವರೂಪವನ್ನು ಹೋಲುತ್ತದೆ. ಓಟೆ ಅಥವಾ ಬಿದಿರನ್ನು ತಂದು ಸಿಗಿದು 0.3 ಮಿಲಿ ಮೀಟರ್‌ನಷ್ಟು ಅಗಲಕ್ಕೆ ಸೀಳಿ ಅದರ ಒಳಪದರ ತೆಗೆದು ತೆಲುವಾಗಿಸುತ್ತಾರೆ. ಸಾಧಾರಣ ಎರಡು ಮೀಟರ್‌ನಷ್ಟು ಉದ್ದಕ್ಕೆ ಕತ್ತರಿಸುತ್ತಾರೆ. ಆನಂತರ ಮಾದೆರ್ ಅಥವಾ ಎಂಜಿರ್ ಬಳ್ಳಿಯನ್ನು ಆಂಗ್ಲ ಭಾಷೆಯ U ಆಕಾರಕ್ಕೆ ಬರುವ ಹಾಗೆ ಸಾಧಾರಣ ಅರ್ಧ ಮೀಟರ್‌ನಷ್ಟು ಉದ್ದಕ್ಕೆ ಕತ್ತರಿಸಿ ಅದಕ್ಕೆ ಯಾವುದಾದರೂ ಬಳ್ಳಿಯಿಂದ ಬಾಗುವ U ಆಕಾರಕ್ಕೆ ಬರುವ ಹಾಗೆ ಎಳೆದು ಬಳ್ಳಿಯಿಂದ ಕಟ್ಟುತ್ತಾರೆ. ಮೊದಲು

ಬಾಗಿದಂತಹ ಭಾಗಕ್ಕೆ ಪಟ್ಟಿಗಳಾಗಿ ತಯಾರಿಸಿದಂತಹ ಬಿದಿರು, ಓಟೆಯನ್ನು 'ಯು' ಅಕ್ಷರದ ಹಾಗೆ ನೇಯುತ್ತಾ ಬರುತ್ತಾರೆ ಮತ್ತು ಮಂಕರಿಯ ಗಾತ್ರಕ್ಕೆ ಅನುಸಾರವಾಗಿ ನೇಯುತ್ತಾ ಹೋಗುತ್ತಾರೆ. ಅದರ ಮೇಲ್ಭಾಗ ತೆರೆದಂತಿದ್ದು, ಮೇಲ್ಭಾಗವು ಬಾಗದ ಹಾಗೆ ಮಾದೆರ್ ಎಂಜೆರ್ ಬಳ್ಳಿಯನ್ನು ಬಳಸುತ್ತಾರೆ. ಸಾಧಾರಣ ಅದರ ಮುಂಭಾಗ ಒಂದು ಅಡಿಯಿಂದ ಎರಡು ಅಡಿಯಷ್ಟು ಅಗಲವಾಗಿ ನೇಯುತ್ತಾರೆ. ಬಿದಿರು ಪಟ್ಟಿಯನ್ನು ಹೊರ ಮೈ- ಹೊರಮೈಯಾಗಿ ಒಳಮೈ ಒಳಮೈಯಾಗಿ ನೇಯುತ್ತಾರೆ. ಅದರ/ಮಂಕರಿಯ ಬುಡಭಾಗ ಅರ್ಧ ಅಡಿಯಷ್ಟು ಆಳವಿದ್ದು ಎದುರುಭಾಗಕ್ಕೆ ಬಂದ ಹಾಗೆ ಆಳ ಕಡಿಮೆಯಾಗಿ ಮುಂಭಾಗ ವಿಶಾಲವಾಗಿರುತ್ತದೆ. ಮಂಕರಿಯನ್ನು ಕಡುಹಾಕಿದ ನೀರಿನ ಮೀನನ್ನು ಹಿಡಿಯಲು ಗಾಳಕ್ಕೆ ಪೋಣಿಸಲು ಸಿಗಡಿ ಹಿಡಿಯಲು, ಕಡುಹಾಕಿದ ನೀರನ್ನು ಕದಡಲು, ಗೋರು ಬಲೆಯಲ್ಲಿ ಸಿಕ್ಕಿದ ಮೀನನ್ನು ಹಿಡಿಯಲು, ಗಾಳದಲ್ಲಿ ಸಿಕ್ಕಿದ ಹಾವು ಮೀನು, ಪುರಿಯೊಲು ಅಥವಾ ನೊಲಿ ಮೀನು ಹಿಡಿಯಲು, ಏಡಿ ಹಿಡಿಯಲು, ಹರಿವ ನೀರಿನಲ್ಲಿ ಮೀನು ಕೆಳಗೆ ಇಳಿದು ಹೋಗದಂತೆ ಅಡ್ಡವಾಗಿ ಹಿಡಿಯಲು ಮತ್ತು ಸಿಕ್ಕಿದಂತಹ ಮೀನಿನ ಹುರುಪೆ ತೆಗೆಯಲು, ಅಂದರೆ ಕಲ್ಲು ಸಿಗದಿದ್ದಾಗ ಅದರಲ್ಲಿ ಉಜ್ಜಿ ಮೀನಿನ ಹುರುಪೆ ತೆಗೆಯುತ್ತಾರೆ. ಈ ರೀತಿಯಾಗಿ ಮೀನು ಬೇಟೆಗಾರಿಕೆಯಲ್ಲಿ ಬಹುಪಯೋಗಿಯಾಗಿ ಬಳಸಲ್ಪಡುವ ವಸ್ತುವೆಂದರೆ ಮಂಕರಿ. ಬಿದಿರಿನಿಂದ ತಯಾರಿಸಿದ ಮಂಕರಿಯಾದರೆ ಹೆಚ್ಚು ಬಾಳಿಕೆ ಬರುತ್ತದೆ. ಮೀನು ಹಿಡಿಯಲು ಹೋಗುವಾಗ ಮಂಕರಿಯನ್ನು ಕವುಚಿ ಹಿಡಿಯಬಾರದು ಅದು ಅಪಶಕುನ ಎಂಬ ನಂಬಿಕೆ ಜನಪದರಲ್ಲಿದೆ. ಆದುದರಿಂದ ಸಿಹಿಮೀನು ಬೇಟೆಗಾರಿಕೆಯಲ್ಲಿ 'ಮಂಕರಿ' ಸರ್ವರೀತಿಯಲ್ಲಿ ಉಪಯುಕ್ತ ಸಾಧನವಾಗಿದೆ.

## 4.2 ಕೂರಿ

ಕೂರಿ ಅನ್ನುವ ಪರಿಕರವನ್ನು ಬಿದಿರು, ಓಟೆ, ತೆಂಗಿನ ಗರಿ, ಇಲ್ಲ್ ಬೂರ್ದ ಕೂರಿ ಬೈನೆ ಮರದ ಗರಿ ಇವುಗಳಿಂದ ತಯಾರಿಸುತ್ತಾರೆ. ಮೊದಲು ಕೂರಿ ತಯಾರಿಸುವ ವಿಧಾನವನ್ನು ವಿವರಿಸಿ ಆನಂತರ ಅದರಲ್ಲಿ ಮೀನು ಹಿಡಿಯುವ ವಿಧಾನವನ್ನು ತಿಳಿಸಲಾಗುವುದು.

### 4.2.1 ಬಿದಿರು ಕೂರಿ:

ಬಿದಿರು ಕೂರಿಯನ್ನು ಬಿದಿರಿನಿಂದ ತಯಾರಿಸುತ್ತಾರೆ. ಸುಮಾರು ಒಂದೂವರೆ ಮೀಟರ್‌ನಷ್ಟು ಉದ್ದದ ಸಾಧಾರಣ ಗಾತ್ರದ ಬಿದಿರನ್ನು ತಂದು ಅದರ ಗೆಲ್ಲುಗಳನ್ನು ತೆಗೆಯಬೇಕು. ಕೆಳಗಿನಿಂದ ಎರಡು ಗಂಟುಗಳನ್ನು ಬಿಟ್ಟು ಅದರಿಂದ ಮೇಲೆ 0.5 ಮೀಟರ್‌ನಷ್ಟು ಗಾತ್ರಕ್ಕೆ ಇಡೀ ಬಿದಿರನ್ನು ಸಿಗಿಯಬೇಕು. ಆನಂತರ ಸಿಗಿದಂತಹ/ಸೀಳಿದಂತಹ ಬಿದಿರಿನ ಒಳಮೈಯನ್ನು ತೆಗೆದು ತೆಳುವಾಗಿ ಪರಿವರ್ತಿಸಬೇಕು. ಆನಂತರ ಉದ್ದವಾದ ಬಿದಿರನ್ನು ಸೀಳಿ 0.3 ಸೆಂ.ಮೀ.ನಷ್ಟು ಅಗಲಕ್ಕೆ ಪರಿವರ್ತಿಸಬೇಕು. ಈ ರೀತಿ ಪರಿವರ್ತಿಸಿದ ಬಿದಿರು ಅಥವಾ ಓಂಟೆ, ಓಂಟೆಯ ನೆರುವನ್ನು ಸೀಳಿದಂತಹ ಬಿದಿರಿಗೆ ತಳಮಟ್ಟದಿಂದ ಹೆಣೆಯುತ್ತಾ ಮೇಲ್ಮುಖವಾಗಿ ಬರುತ್ತಾರೆ. ತಳಮಟ್ಟದಲ್ಲಿ ಹೆಣೆಯುವ ಸಂದರ್ಭದಲ್ಲಿ ಬಿದಿರಿನ

'ನೆರು'ವನ್ನು ಮತ್ತಷ್ಟು ಚಿಕ್ಕದಾಗಿ ಸೀಳುತ್ತಾರೆ. ಇಲ್ಲವಾದರೆ ಸೀಳಿದಂತಹ ಬಿದಿರಿಗೆ ಹೆಣೆಯಲು ಕಷ್ಟಕರವಾಗುತ್ತದೆ. ಸುಮಾರು ಒಂದು ಮೀಟರ್‌ನಷ್ಟು ಎತ್ತರಕ್ಕೆ ವೃತ್ತಾಕಾರವಾಗಿ ಹೆಣೆಯುತ್ತಾ ಬರುತ್ತಾರೆ. ಆರಂಭದಲ್ಲಿ ಹೆಣೆಯಲು ಆರಂಭಿಸುವ ಸಂದರ್ಭದಲ್ಲಿ ಬಿದಿರಿನ ಒಳಭಾಗದಲ್ಲಿ ಸಾಧಾರಣ ಗಾತ್ರದ ತೆಂಗಿನಗೆರಟೆಯನ್ನು ಇಡುತ್ತಾರೆ. ಆನಂತರ ನಮಗೆ ಬೇಕಾದಷ್ಟು ಗಾತ್ರದ ಯಾವುದಾದರೂ ಗಟ್ಟಿ ಬಳ್ಳಿಯನ್ನು ವೃತ್ತಾಕಾರವಾಗಿ ಸುತ್ತ ಗೆರಟೆಯ ನಂತರ ಒಳಭಾಗದಲ್ಲಿ ಇಡಬೇಕು. ಆವಾಗ ಸರಿಯಾಗಿ ವೃತ್ತಾಕಾರವಾಗಿ ಹೆಣೆಯಲು ಸಾಧ್ಯವಾಗುತ್ತದೆ. ಇದು ಮೊದಲನೆಯ ಹಂತವಾದರೆ ನಂತರದ ಹಂತ ಅದಕ್ಕೆ 'ಕಂಜಿ'ಮಾಡುವುದು. ಮಂಕರಿಯ ಹಾಗೆ ಅದರ ಆಕಾರವಿರುತ್ತದೆ ಮತ್ತು ಅದರ ಒಳಮೈ ತೆರೆದಿದ್ದು ಒಳ ಮುಖವಾಗಿ ಅದರ ನೆರುವನ್ನು ಹೆಣೆಯದೆ ಬಿಟ್ಟಿರುತ್ತಾರೆ. ಅದರ ಬಾಯಿಯು ಮೇಲ್ಮುಖವಾಗಿ ತೆರೆದಿರುತ್ತದೆ. ಕೊನೆಯಲ್ಲಿ ಅದನ್ನು ಚೂಪಾಗಿ ಕತ್ತರಿಸುತ್ತಾರೆ. ಅದರ ಬಾಯಿಯು ಮನುಷ್ಯನ ಕೈ ಹೋಗುವಷ್ಟು ತೆರೆದಿರುತ್ತದೆ. ಕೂರಿಯ ಕಂಜಿಯನ್ನು ಕೂರಿಗೆ ಸೇರಿಸುವ ಮೊದಲು ಸಾಧಾರಣವಾಗಿ ಕೂರಿಯ ಕೊನೆಯ ಹಂತದ ನೇಯ್ಗೆಯ ಮೊದಲು ಸಾಧಾರಣವಾಗಿ ಕೈಹೋಗುವಷ್ಟು ಗಾತ್ರದಷ್ಟು ಸಣ್ಣಕಿಂಡಿಯನ್ನು ಮಾಡುತ್ತಾರೆ. ಎಲ್ಲಾ ಕೆಲಸ ಸಂಪೂರ್ಣ ಆದ ಬಳಿಕ ಕೂರಿಯ ಬಾಯಿಗೆ ಅದರ ಕರು(ಕಂಜಿಯನ್ನು)ವನ್ನು ಸೇರಿಸಿ ಕೂರಿಗೆ ಮತ್ತು ಅದರ ಕಂಜಿಗೆ ಕಬ್ಬಿಣದ ಸರಿಗೆ ಅಥವಾ ಬಿದಿರಿನಿಂದ ಮಾಡಿದಂತಹ ನೆರುವಿನಿಂದ ಕಟ್ಟುತ್ತಾರೆ ಮತ್ತು ಪರಸ್ಪರ ಜೋಡಿಸುತ್ತಾರೆ.

### 4.2.2 ತೆಂಗಿನ ಗರಿಯ ಕಡ್ಡಿಯಿಂದ ತಯಾರಿಸಿದ ಕೂರಿ

ತುಳುಭಾಷೆಯಲ್ಲಿ ಮೈಪುದ ಕೂರಿ ಎಂದು ಕರೆಯುತ್ತಾರೆ. ಇದರಲ್ಲಿ ಬಳಕೆಯಾಗುವ ವಸ್ತುಗಳು 3. ತೆಂಗಿನಗರಿಯ ಕಡ್ಡಿ, ತೆಂಗಿನಕಾಯಿಯ ಸಿಪ್ಪೆ ಮತ್ತು ಕೈಯೋಲಿ ಗಿಡದ ಹಗ್ಗ.

ಸರಿಯಾದ ತೆಂಗಿನ ಗರಿಯನ್ನು ಆಯ್ಕೆ ಮಾಡಿ ಅದರ ಕಡ್ಡಿಯನ್ನು ಹಿಡಿಸೂಡಿಗೆ ಆಗುವ ಹಾಗೆ ನಯಗೊಳಿಸುತ್ತಾರೆ. ಹೆಚ್ಚು ಕಡ್ಡಿಯನ್ನು ತಯಾರುಗೊಳಿಸಿ ಕಾಡಿನಲ್ಲಿ ಸಿಗುವಂತಹ ಕೈಯೋಲಿ ಗಿಡದ ಗೆಲ್ಲನ್ನು ಕಡಿದು ತಂದು ನೆಲದಲ್ಲಿ ಬಡಿದು ಕಟ್ಟೆಗೆಯನ್ನು ಬೇರ್ಪಡಿಸುತ್ತಾರೆ. ಆ ಕೈಯೋಲಿ ಗಿಡದ ತೊಗಟೆಯ ಮೇಲಿನ ಸಿಪ್ಪೆಯನ್ನು ತೆಳುವಾಗಿ ತೆಗೆಯುತ್ತಾರೆ. ನಂತರ ಅದನ್ನು ಹಗ್ಗವನ್ನಾಗಿ ಪರಿವರ್ತಿಸುತ್ತಾರೆ. ಚಿಕ್ಕ/ತೆಳು ಹಗ್ಗವನ್ನು ಹುರಿ ಹಗ್ಗದಂತಾಗೆ ನೇಯ್ಗೆ ಮಾಡಿ ಉದ್ದ ಹಗ್ಗವನ್ನಾಗಿ ತಯಾರಿಸುತ್ತಾರೆ. ಕಡ್ಡಿಯನ್ನು ಬುಡಭಾಗದಿಂದ/ಕಡ್ಡಿಯ ದಪ್ಪ ಭಾಗದಿಂದ ನೇಯಲು ಆರಂಭಿಸುತ್ತಾರೆ. ನೇಯ್ಗೆ ಆರಂಭಿಸುವ ಸಂದರ್ಭದಲ್ಲಿ ಎರಡೆರಡೇ ಕಡ್ಡಿಯನ್ನು ಹತ್ತಿರ ಹತ್ತಿರ ನೇಯ್ಗೆ ಮಾಡುತ್ತಾರೆ. ಆರಂಭದಲ್ಲಿ ಸಮತಲಮಟ್ಟವಾಗಿ ನೇಯ್ಗೆ ಮಾಡಿ ಆನಂತರ ಮಾದೆರ್ ಬಳ್ಳಿಯ ಅಥವಾ ಚಿಕ್ಕ ಬೆತ್ತದ ಚಕ್ರವನ್ನು ತಯಾರಿಸಿ ಮಧ್ಯದಲ್ಲಿಟ್ಟು ಚಾಪೆ ಮಡಿಸಿದ ಹಾಗೆ ಮಡಚಿ ತೆರೆದಿಟ್ಟು ಜೋಡಿಸುತ್ತಾರೆ. ಆ ನಂತರ ಬಿದಿರು ಕೂರಿಯ ಹಾಗೆ ಅದಕ್ಕೆ ಕರು (ಕಂಜಿ)ಯನ್ನು ತಯಾರಿಸಿ ತೆಂಗಿನ ಕಾಯಿಯ ಸಿಪ್ಪೆ, ಮುಳಿಹುಲ್ಲನ್ನು ಸುತ್ತಿ ಆನಂತರ ಕಂಜಿಯನ್ನು ಕೂರಿಗೆ ಸೇರಿಸುತ್ತಾರೆ. ಆವಾಗ ಅದು

ವೃತ್ತಾಕಾರವಾಗಿಯೇ ಉಳಿಯುತ್ತದೆ. ಮತ್ತು ಕೂರಿಗೆ ಸೇರಿದಂತಹ ಮೀನುಗಳು ಹೊರಗೆ ಹೋಗದ ಹಾಗೆ ಇದು ತಡೆಯುತ್ತದೆ ಮತ್ತು ಅದರಲ್ಲಿ ಅಂತರ ಉಳಿಯುವುದಿಲ್ಲ. ತೆಂಗಿನ ಗರಿಯಿಂದ ತಯಾರಿಸಿದಂತಹ ಕೂರಿಗೆ ಮಧ್ಯದಲ್ಲಿ ರಂಧ್ರ ಬಿಡುವುದಿಲ್ಲ. ಬದಲಾಗಿ ಕಡೆಭಾಗದಲ್ಲಿ ಅಂದರೆ ಕಡ್ಡಿಯ ತುದಿಭಾಗವು ಚೂಪಾಗಿ ಆಕಾರ ಬರುವ ಹಾಗೆ ನೇಯ್ದಿರುತ್ತಾರೆ. ಆವಾಗ ಮೀನು ಬೇಟೆಯಾಡಲು ನೀರಿಗೆ ಇಡುವ ಮೊದಲು ಕೂರಿಯ ಕಡೆಯನ್ನು ಕಟ್ಟುತ್ತಾರೆ. ಮೀನು ತೆಗೆಯುವ ಸಂದರ್ಭದಲ್ಲಿ ಕಟ್ಟಿದಂತಹ ಕಟ್ಟವನ್ನು ಬಿಚ್ಚಿಸಿ ಮೀನು ಹಿಡಿಯುತ್ತಾರೆ. ಆನಂತರ ಪುನಃ ಹಾಗೆ ಕಟ್ಟಿ ನೀರಿನಲ್ಲಿ ಎಲ್ಲಿಯೂ ಬೇರೆ ಕಡೆ ಒಂದು ಚೂರೂ ಅಂತರ ಇಲ್ಲದ ಹಾಗೆ ಇಟ್ಟು ನೀರು ಎಲ್ಲವೂ ಕೂರಿಯ ಬಾಯಿಯಿಂದಲೇ ಹರಿದು ಹೋಗುವ ಹಾಗೆ ಎಚ್ಚರವಹಿಸುತ್ತಾರೆ. ಮೀನುಗಳಿಗೆ  ಕೂರಿಯಲ್ಲಿ ಸಿಕ್ಕಿ ಹಾಕಿಕೊಂಡಿರುವ ಇತರ ಮೀನುಗಳ ವಾಸನೆಯಿಂದ ಸಂಶಯ ಬಂದರೆ ಕೂರಿಯ ದಾರಿಯನ್ನು ಬಿಟ್ಟು ಬೇರೆ ಕಡೆ ನುಗ್ಗಲು ಪ್ರಯತ್ನಿಸುತ್ತವೆ ಅಥವಾ ಕೂರಿಯನ್ನು ದಾಟಿ ಹಾರುವ ಸಂದರ್ಭಗಳೂ ಇರುತ್ತವೆ.

### 4.2.3 ಇಲ್ಲ್ ಬೂರ್ದ ಕೂರಿ:

ತುಳು ಭಾಷೆಯಲ್ಲಿ 'ಇಲ್ಲ್' ಅಂದರೆ ಮನೆ. ಆದರೆ ಇಲ್ಲ್ ಬೂರು ಅಂದರೆ ಕಾಡಿನಲ್ಲಿ ಸಿಗುವಂತಹ ಬಳ್ಳಿಗೆ 'ಇಲ್ಲ್ ಬೂರು' ಎಂದು ಕರೆಯುತ್ತಾರೆ. ಇದು ನೆಲದಲ್ಲಿ ಮತ್ತು ಮರಗಳನ್ನು ಆಶ್ರಯಿಸಿಕೊಂಡಿರುತ್ತದೆ. ತುಂಡು ಮಾಡಿದಾಗ ಅದರಲ್ಲಿ ಬಿಳಿ ದ್ರವ ಬರುತ್ತದೆ. ಈ ಬಳ್ಳಿಯು ಸಾಧಾರಣವಾಗಿ 5–6 ಮೀಟರ್‌ಗಿಂತಲೂ ಉದ್ದವಾಗಿ ಬೆಳೆಯುತ್ತದೆ. ಬಳ್ಳಿಯ ಮೇಲಿನ ಸಿಪ್ಪೆ ತೆಗೆದು ನೀರಿನಲ್ಲಿ ನೆನೆ ಹಾಕುತ್ತಾರೆ. ಆ ನಂತರ ಕಾಂಡೇರಿಯ ಹಾಗೆ ತಳಮಟ್ಟದಲ್ಲಿ ಒಂದು ಅಡಿಯಷ್ಟು ಅಗಲಕ್ಕೆ ಹೆಣೆದು ಆ ನಂತರ ಸಾಧಾರಣ ಒಂದು ಮೀಟರ್ ಉದ್ದಕ್ಕೆ ಹೆಣೆಯುತ್ತಾರೆ. ಪೂರ್ಣಗೊಳಿಸುವ ಮೊದಲು ಕಾಂಡೇರಿ, ಬಿದಿರಿನ ಕೂರಿಯ ತಯಾರಿಕೆಯಲ್ಲಿ ಉಲ್ಲೇಖಿಸಿದ ಹಾಗೆ ಎರಡು ಇಂಚು ಗಾತ್ರಕ್ಕೆ ರಂದ್ರ ಬಿಡುತ್ತಾರೆ. ಅದರಿಂದ ಮೀನು ತೆಗೆಯಲು ಈ ತಂತ್ರವನ್ನು ಅಳವಡಿಸಿಕೊಳ್ಳುತ್ತಾರೆ.

ಹಿಡಿಸೂಡಿ ಕಡ್ಡಿ, ಬಿದಿರು, ಓಟೆ, ಇಲ್ಲ್ ಬಲ್ಲ್(ಮನೆ ಬಿಳಲು)ವಿನಿಂದ ಮಾಡಿರುವಂತಹ ಕೂರಿಗಳನ್ನು ಸರ್ವ ಋತುಗಳಲ್ಲಿ ಮೀನು ಹಿಡಿಯಲು ಬಳಸುತ್ತಾರೆ. ಕಡು ಹಾಕಿದಂತಹ ಸಂದರ್ಭದಲ್ಲಿ ವಿಷವನ್ನೂ ತಡೆಯಲಾರದೆ ಕಣ್ಣುರಿಯಿಂದ ಮೀನುಗಳು ಇಳಿಯಲಾರಂಭಿಸುತ್ತವೆ. ಆಗ ಮೀನುಗಳು ಈ ಕೂರಿಗಳಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ. ಇನ್ನೊಂದು ಸಂದರ್ಭ ಯಾವುದೆಂದರೆ ಮಳೆಗಾಲದಲ್ಲಿ ಮೊಟ್ಟೆ ಇಡಲು ತೋಡುಗಳಿಗೆ, ಗದ್ದೆಗಳಿಗೆ ಮೀನುಗಳು ಮೇಲೆ ಹತ್ತುತ್ತಿರುತ್ತವೆ. ಇದಕ್ಕೆ ತುಳು ಭಾಷೆಯಲ್ಲಿ ಉಬರ್/ಉಬೆರ್ ಬಡ್ತುನ ಎಂದು ಕರೆಯುತ್ತಾರೆ. (ಉಬರ್ ಹತ್ತುವುದು) ಇಂತಹ ಕಾಲದಲ್ಲಿ ಕೂರಿಗಳನ್ನು ಕೆಳಮುಖವಾಗಿ ಇಡಬೇಕು. ಹರಿಯುವ ನೀರು ಕೂರಿಯ ಬಾಯಿಂದ ಹೊರಬರುತ್ತದೆ. ಮೀನುಗಳು ನೀರು ಹರಿದು ಬರುವ ದಿಕ್ಕಿಗೆ ಆತುರ ಆತುರವಾಗಿ ಮೊಟ್ಟೆ ಇಡಲೆಂದು ಹತ್ತುತ್ತಿರುತ್ತವೆ.

ಆಗ ಇಟ್ಟಂತಹ ಕೂರಿಗಳಲ್ಲಿ ಮೀನುಗಳು ಸಿಕ್ಕಿಹಾಕಿಕೊಳ್ಳುತ್ತವೆ. ಆದರೆ ಮೀನುಗಳು ಹತ್ತುವ ವಿರುದ್ಧ ದಿಕ್ಕಿನಲ್ಲಿ ಸತ್ತ ಮೀನುಗಳ ವಾಸನೆ ಬರುವುದರಿಂದ ಕೆಲವು ಸಲ ಮೀನುಗಳು ಹೆದರಿಕೊಳ್ಳುತ್ತವೆ. ಆವಾಗ ಸಿಕ್ಕಂತಹ ಮೀನುಗಳನ್ನು ಖಾಲಿ ಮಾಡಿ ಪುನಃ ಕೂರಿಗಳನ್ನು ಇಡಬೇಕಾಗುತ್ತದೆ. ಆ ನಂತರ ಯಥಾ ಪ್ರಕಾರ ಮೀನುಗಳು ಸಿಗಲಾರಂಭಿಸುತ್ತವೆ. ಸಿಹಿ ನೀರಿನಲ್ಲಿರುವ ಚಿಕ್ಕ ಜಾತಿಯ ತರು, ಕಲುಂಬುರು, ಸೀರ್ಕೊಟೆ, ಬಾಲೆ, ಮುಗುಡು, ಪಾಚೊಲ್ತಿ, ಕೀಜನ್ ಮುಂತಾದ ಅನೇಕ ಜಾತಿಯ ಸಿಹಿ ನೀರು ಮೀನುಗಳು ಈ ಕೂರಿಗಳಲ್ಲಿ ಸಿಗುತ್ತವೆ.

### 4.2.4 ಬೈನೆ ಮರದ ಕೂರಿ:

ಬೆಳೆದ ಬೈನೆ ಮರದ ಗೆಲ್ಲನ್ನು ಕಡಿದು ತಂದು ಅದರ ಗರಿಯನ್ನು ಚೆನ್ನಾಗಿ ಸವರಿ ಅದರಲ್ಲಿನ ದಪ್ಪವಾದ ಕಡ್ಡಿಯನ್ನು ತೆಂಗಿನ ಮರದ ಕಡ್ಡಿಯ ಹಾಗೆ ನಯಗೊಳಿಸುತ್ತಾರೆ. ನಯಗೊಳಿಸಿದ ಅನೇಕ ಕಡ್ಡಿಗಳನ್ನು ಸಂಗ್ರಹಿಸಿಟ್ಟುಕೊಂಡಿರುತ್ತಾರೆ. ನಂತರ ಕಾಡಿನಲ್ಲಿ ಸಿಗುವ ಕೈಯೊಲಿ ಮರದ ಗೆಲ್ಲಿನ ಸಿಪ್ಪೆ ತೆಗೆದು ಹಗ್ಗವನ್ನಾಗಿ ಪರಿವರ್ತಿಸುತ್ತಾರೆ. ತೆಂಗಿನ ಗರಿಯಿಂದ ಕೂರಿ ತಯಾರಿಸುವ ಹಾಗೆಯೇ ನೇಯುತ್ತಾರೆ. ಕಡ್ಡಿಯ ಕಡೆಭಾಗ ಮೇಲ್ಭಾಗ ಬರುವ/ ಇರುವ ಹಾಗೆ ಅದೇ ರೀತಿ ತುದಿಭಾಗ ಹಿಂದೆ ಬರುವ ಹಾಗೆ ಹೆಣೆಯುತ್ತಾರೆ. ಕೂರಿಯ ಬಾಯಿ ಭಾಗದಿಂದ ಒಂದು ಹಗ್ಗವನ್ನು ಕೂರಿಯ ಹಿಂಬದಿ ಬಾಯಿ ಕಟ್ಟಲು ಬಳಸುತ್ತಾರೆ. ದೊಡ್ಡ ಗಾತ್ರದ ಮೀನುಗಳು ಕೂರಿಯೊಳಗೆ ನುಗ್ಗಿದಾಗ ಅದರ ರಭಸಕ್ಕೆ ಕೂರಿಯ ಕಟ್ಟು ಬಿಚ್ಚುವ ಸಂಭವ ಇರುತ್ತದೆ. ಹಾಗಾಗಿ ಹಗ್ಗವನ್ನು ಕೂರಿಯ ಕುತ್ತಿಗೆ ಭಾಗದಿಂದ ಕಟ್ಟಲು ಸಂಪರ್ಕ ಕಲ್ಪಿಸುತ್ತಾರೆ. ಆಧುನಿಕ ಸಂದರ್ಭದಲ್ಲಿ ಪಾಲಿಥೀನ್ ಹಗ್ಗವನ್ನು ನೇಯಲು/ ಹೆಣೆಯಲು ಬಳಸುತ್ತಾರೆ. ಮೀನು ತೆಗೆಯಲು ಹಿಂದಿನ ಬಾಯಿಯನ್ನು ಬಿಚ್ಚುತ್ತಾರೆ.

## 4.3 ಕಾಂಡೇರಿ

**ತಯಾರಿಸುವ ವಿಧಾನ:**

ಕಾಂಡೇರಿಯು ಕೂರಿಯ ಹಾಗೆ ಇದೆ ಆದರೆ ಇದನ್ನು ಮಳೆಗಾಲದಲ್ಲಿ ಬಳಸುವ ಹಾಗೆ ಇಲ್ಲ. ಕಾಂಡೇರಿಯನ್ನು ಬಿದಿರಿನಿಂದ ತಯಾರಿಸುತ್ತಾರೆ. ಒಳ್ಳೆ ಬಲಿತ ಬಿದಿರನ್ನು ತಂದು ಒಂದು ಸೆಂಟಿಮೀಟರ್‌ನಷ್ಟು ಅಗಲಕ್ಕೆ ಸೀಳಬೇಕು. ಸೀಳಿದ ಬಿದಿರಿನ ಒಳಮೈಯನ್ನು ಸ್ವಲ್ಪ ತೆಗೆದು ಸಾಧಾರಣ ತೆಳುವಾಗಿ ಪರಿವರ್ತಿಸುತ್ತಾರೆ. ತಳಭಾಗವು ಚೌಕಾಕಾರ ಬರುವ ಹಾಗೆ ಮತ್ತು ಚೌಕಾಕಾರವಾಗಿ ಒಂದೂವರೆ ಇಂಚಿನಷ್ಟು ಅಗಲಕ್ಕೆ ಅಂತರವಿರುವಷ್ಟು ಹೆಣೆಯುತ್ತಾ ಬರುತ್ತಾರೆ. ಹೆಣೆಯಲು 1 ಸೆಂಟಿಮೀಟರ್‌ನಷ್ಟು ಅಗಲವಾದ ಬಿದಿರಿನ 'ನೆರು' ವನ್ನು ತಯಾರಿಸಿಡಬೇಕು. ಅದನ್ನು ಹೆಣೆಯುತ್ತಾ ಬರಬೇಕು. ತಳಭಾಗ ಒಂದು ಮೀಟರ್‌ನಷ್ಟು ಅಗಲವಾದ ನಂತರ ಅಷ್ಟೇ ಅಗಲಕ್ಕೆ ಉದ್ದವಾಗಿ ಹೆಣೆಯಬೇಕು. ಸುಮಾರು ಎರಡು ಮೀಟರ್‌ನಷ್ಟು ಉದ್ದಕ್ಕೆ ಹೆಣೆಯುತ್ತಾರೆ. ಪೂರ್ಣಗೊಳಿಸುವ ಅರ್ಧ

ಅಡಿ ಮೊದಲು ಸಾಧಾರಣ ಒಂದು ಗೇಣು ಅಗಲಕ್ಕೆ ಅಥವಾ 5 ಇಂಚಿನಷ್ಟು ಗಾತ್ರದಷ್ಟು ಹೆಣೆಯದೆ ತೆರೆದಿರುತ್ತಾರೆ. ಕೂರಿಯ ಹಾಗೆ ದಪ್ಪವಾದ ಮಾದೆರ್ ಬಳ್ಳಿಯನ್ನು ಆಂಗ್ಲಭಾಷೆಯ 'U' ಆಕಾರಕ್ಕೆ ಬಗ್ಗಿಸಿ ಅದರಲ್ಲಿ ಸೀಳಿದ ಬಿದಿರಿನ ನೆರುವನ್ನು ಮಂಕರಿಯ ಹಾಗೆ ಹೆಣೆದು ಮಧ್ಯಭಾಗದಲ್ಲಿ ಹೆಣೆಯದೇ ಬಿಟ್ಟು ರಂಧ್ರದ ಹಾಗೆ ತೆರೆದಿರುತ್ತಾರೆ. ಹೆಣೆಯದೇ ಬಿಟ್ಟಿರುವ ಬಿದಿರಿನ ನೆರುವನ್ನು ಸ್ವಲ್ಪ ಉದ್ದಕ್ಕೆ ಬಿಟ್ಟು ಚೂಪಾಗಿ ಕತ್ತರಿಸುತ್ತಾರೆ. ಕಾಂಡೇರಿಯ 'ಕಂಜಿ' (ಕರು) ಚಿಕ್ಕದು ಎಂದರ್ಥ ಅದನ್ನು 2 ಮೀಟರ್‌ನಷ್ಟು ಉದ್ದ ಕೂರಿಗೆ ಸೇರಿಸಿ ಕಟ್ಟಬೇಕು. ಸೇರಿಸುವ ಸಂದರ್ಭದಲ್ಲಿ 5 ಇಂಚಿನಷ್ಟು ಅಗಲಕ್ಕೆ ಹೆಣೆಯದೆ ಬಿಟ್ಟಿರುವ ತೆರೆದ ಭಾಗವು ಮೇಲ್ಮುಖವಾಗಿ ಇರುವ ಹಾಗೆ ಅದರ ಕಂಜಿ/ಮುಚ್ಚಳವನ್ನು ಅದಕ್ಕೆ ಬಿಗಿಯಾಗಿ ಕಬ್ಬಿಣದ ಸರಿಗೆ ಅಥವಾ ಇನ್ಯಾವುದೇ ಗಟ್ಟಿಯಾದ ನಾರು ಹಗ್ಗದಿಂದ ಗಟ್ಟಿಯಾಗಿ ಕಟ್ಟುತ್ತಾರೆ. ಅದರ ಕಂಜಿಯು/ಮುಚ್ಚಳವು ಅಂದರೆ ತಲೆಭಾಗ ಕಾಂಡೇರಿಗಿಂತ ಸ್ವಲ್ಪ ಎತ್ತರವಾಗಿರಬೇಕು. ತಳಭಾಗ ಚೌಕಾಕಾರವಾಗಿದ್ದರೂ ಆ ನಂತರ ವೃತ್ತಾಕಾರವಾಗಿ ಡ್ರಮ್/ಪ್ಲಾಸ್ಟಿಕ್ ಡ್ರಮ್ ಹಾಗೆ ವೃತ್ತಾಕಾರವಾಗಿರುತ್ತದೆ.

**ಮೀನು ಹಿಡಿಯುವ ವಿಧಾನ:**

ಕಾಂಡೇರಿಯನ್ನು ಹೆಚ್ಚಾಗಿ ನದಿ ನೀರು ಕೆಳಮುಖವಾಗಿ ಹರಿಯುವ ಜಾಗದಲ್ಲಿ ಇಡುತ್ತಾರೆ. ಸಾಮಾನ್ಯವಾಗಿ ಮಳೆಗಾಲ ಕಳೆದು ಬೇಸಿಗೆ ಕಾಲ ಆರಂಭವಾಗುವ ಆ ಸಂದರ್ಭದಲ್ಲಿ ಬಳಕೆಯಾಗುತ್ತದೆ. ಸೆಪ್ಟೆಂಬರ್ ಅಕ್ಟೋಬರ್ ಮತ್ತು ನವಂಬರ್ ತಿಂಗಳಿನಲ್ಲಿ ಕಾಂಡೇರಿಯನ್ನು ಬಳಸುತ್ತಾರೆ. ಅಂದರೆ ಮಳೆಗಾಲದಲ್ಲಿ ಮೊಟ್ಟೆ ಇಡಲು ಹಾಗೂ ಇತರ ಕಾರಣಕ್ಕಾಗಿ ಸಂಚಾರ ಬೆಳೆಸಿದಂತಹ ದೊಡ್ಡ ದೊಡ್ಡ ಮೀನುಗಳು ಮೇಲೆ ಉಲ್ಲೇಖಿಸಿದ ಮೂರು ತಿಂಗಳುಗಳ ಅವಧಿಯಲ್ಲಿ ಹೆಚ್ಚಾಗಿ ಮಧ್ಯಭಾಗದಲ್ಲಿ ರಭಸವಾಗಿ ಹರಿಯುವ ನೀರಿನಲ್ಲಿ ಇಳಿಯದೆ ನದಿಯ ಬದಿಗಳಲ್ಲಿ ಸಾಧಾರಣ ನೀರು ಹರಿಯುವ ಗಂಡಿಗಳಲ್ಲಿ ಇಳಿಯುತ್ತವೆ. ನೀರು ಇಳಿಯುವ ಜಾಗದಲ್ಲಿ ಎಲ್ಲಾ ನೀರು ಕಾಂಡೇರಿಯ ಬಾಯಿ ಮೂಲಕವೇ ಹಾದು ಹೋಗುವ ಹಾಗೆ ಅಡ್ಡವಾಗಿ ಮೇಲ್ಭಾಗಕ್ಕೆ ಬಡಿಗೆ, ಬದಿಗಳಲ್ಲಿ ಕಲ್ಲುಗಳನ್ನು ಬಳಸಿಕೊಂಡು ಎಲ್ಲಾ ನೀರು ಕಾಂಡೇರಿಯ ಮೂಲಕ ಹಾದುಹೋಗುವ ಹಾಗೆ ಮಾಡುತ್ತಾರೆ. ಸಪ್ಟೆಂಬರ್ ಅಕ್ಟೋಬರ್ ತಿಂಗಳಿನಲ್ಲಿ ಸ್ವಲ್ಪ ಪ್ರಮಾಣದಲ್ಲಿ ಮಳೆ ಬಂದು ನೀರು ಹೆಚ್ಚಾಗಿ ಕಾಂಡೇರಿಯು ಕೊಚ್ಚಿಕೊಂಡು ಹೋಗುವ ಸಂಭವವಿರುತ್ತದೆ. ಅದಕ್ಕಾಗಿ ಕಾಂಡೇರಿಯ ಹಿಂಭಾಗಕ್ಕೆ ಗಟ್ಟಿಯಾದ ಹಗ್ಗ ಅಥವಾ ಕಬ್ಬಿಣದ ಸರಿಗೆಯನ್ನು ಬಳಸಿಕೊಂಡು ಕಲ್ಲಿಗೋ ಅಥವಾ ನದಿಯಲ್ಲಿರುವ ಗಿಡಗಳಿಗೂ ಎಳೆದು ಕಟ್ಟಿರುತ್ತಾರೆ. ಕಾಂಡೇರಿಯನ್ನು ನೀರು ಹರಿಯುವ ದಿಕ್ಕಿಗೆ ಅಭಿಮುಖವಾಗಿ ಕಟ್ಟುತ್ತಾರೆ/ಇಡುತ್ತಾರೆ. ಇಳಿಯುವ ಸಂದರ್ಭದಲ್ಲಿ ಯಾವುದೇ ಅಪಾಯವನ್ನು ಅರಿಯದ ತೇಡೆ, ಮಡೆಂಜಿ, ಹಾವುಮೀನು, ಪೆರುವೋಲು, ದೊಡ್ಡ ಗಾತ್ರದ ನೊಲಿ, ಕೀಜನ್ ಮುಂತಾದ ಮೀನುಗಳು ಈ ಕಾಂಡೇರಿಯಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ. ಕಾಂಡೇರಿಯನ್ನು ನೀರಿನಲ್ಲಿ ಇಡುವಾಗ ಅಡಿಭಾಗದಲ್ಲಿ ಮತ್ತು

ಅದರ ಬದಿಯಲ್ಲಿ ಮೀನುಗಳು ಇಳಿಯದ ಹಾಗೆ ಎಚ್ಚರವಹಿಸುತ್ತಾರೆ. ಮೀನುಗಳ ವಿಚಿತ್ರ ಪ್ರವೃತ್ತಿ ಅಥವಾ ವರ್ತನೆ ಏನು ಅಂದರೆ ಯಾವ ಜಾಗದಿಂದ/ಸ್ಥಳದಿಂದ ಮಳೆಗಾಲ ಆರಂಭವಾಗುವ ಮೊದಲು ಹೊರಟ್ಟಿದ್ದವೋ ಅದೇ ಗುಂಡಿಗೆ ಅಥವಾ ಸ್ಥಳಕ್ಕೆ ಬಂದು ಬೇಸಿಗೆ ಕಾಲದಲ್ಲಿ ಟಿಕ್ಕಾಣಿ ಹೂಡುತ್ತವೆ. ನಂತರ ಮಳೆಗಾಲ ಆರಂಭವಾದ ತಕ್ಷಣ ಪುನಃ ಕಳೆದ ವರ್ಷ ಹೋದ ತೋಡು, ಕಣಿವೆ, ಗದ್ದೆಗಳಿಗೆ ತಮ್ಮ ಪ್ರಯಾಣವನ್ನು ಬೆಳೆಸುತ್ತವೆ. ಮಳೆಗಾಲ ಕಳೆದು ಪುನಃ ಕೆಳಗಿಳಿಯುವ ಸಂದರ್ಭದಲ್ಲಿ ಕಾಂಡೇರಿಗಳಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ. ನೀರಿಗಿಳಿದು ಮೀನು ಇದೆ ಎಂದು ಖಾತರಿಯಾದರೆ ಆನಂತರ ಕಾಂಡೇರಿಯನ್ನು ಮೇಲಕ್ಕೆ ತೆಗೆಯುತ್ತಾರೆ. ತೆಗೆದ ನಂತರ ಕಾಂಡೇರಿಯಲ್ಲಿರುವ 5 ಇಂಚಿನಷ್ಟು ಗಾತ್ರದ ತೆರೆದ ಭಾಗದಲ್ಲಿ ಕಲ್ಲನ್ನು ಇಟ್ಟಿರುತ್ತಾರೆ. ಆ ಕಲ್ಲು ತೆಗೆದು ಮೀನನ್ನು ಹೊರಗೆ ತೆಗೆಯುತ್ತಾರೆ. ಆನಂತರ ಯಥಾವತ್ತಾಗಿ ಹಾಗೆ ನೀರಿನಲ್ಲಿಟ್ಟು ತೆರೆದ ಭಾಗಕ್ಕೆ ಸಾಧಾರಣ ಭಾರವಿರುವ ಕಲ್ಲನ್ನು ಇಡುತ್ತಾರೆ.

**ನಂಬಿಕೆ:**

ಯಾವುದಾದರೂ ಹಸಿಕಡ್ಡಿಯಿಂದ ಹಲ್ಲುಜ್ಜಿಕೊಂಡು ಹಲ್ಲುಜ್ಜಿದ ಕಡ್ಡಿಯನ್ನು ಈ ಕಾಂಡೇರಿಯಲ್ಲಿ ಸಿಕ್ಕಿಸಿದ್ದರೆ ಅದರಲ್ಲಿ ಮೀನು ಸಿಗುವುದಿಲ್ಲ ಅನ್ನುವ ನಂಬಿಕೆ ಈಗಲೂ ಜನಪದರಲ್ಲಿದೆ.

## 4.4 ಕೂಂಜೋಲು:

ಕೂಂಜೋಲುವನ್ನು ಬಿದಿರು ಅಥವಾ ಬಿದಿರಿನ ಚಿಕ್ಕ ತಳಿಯಾದ ಓಟೆಯಿಂದ ತಯಾರಿಸುತ್ತಾರೆ. ಕೂರಿಯ ವಿಧಾನವನ್ನೇ ಇಲ್ಲಿಯೂ ಅವಲಂಬಿಸುತ್ತಾರೆ. ಆದರೆ ಇದಕ್ಕೆ ಕಂಜಿ ಅಥವಾ ಮುಚ್ಚಿಗೆ/ಮುಚ್ಚಳವಿರುವುದಿಲ್ಲ. ಕೂರಿಯನ್ನು ಹೆಣೆಯುವ ಹಾಗೆ ಹೆಣೆಯುತ್ತಾರೆ. ಆದರೆ ಸ್ವಲ್ಪ ವ್ಯತ್ಯಾಸವನ್ನು ಕಾಣಬಹುದು. ಕೂರಿಯನ್ನು ಹೆಣೆಯುವ ಸಂದರ್ಭದಲ್ಲಿ ಕೊನೆಹಂತ ತಲುಪುವಾಗ ಅಗಲವು ಕಿರಿದಾಗಿರುತ್ತದೆ. ಆದರೆ ಕೂಂಜೋಲು ಹೆಣೆಯುವಾಗ ತಳಭಾಗದಿಂದ ಅಗಲವಾಗಿಸುತ್ತಾ ಹೆಣೆದು ಕೊನೆಗೆ ಅದರ ಬಾಯಿ 2 ಅಡಿ ಅಗಲವಿರುತ್ತದೆ ಹಾಗೂ ಕೂರಿಗಿಂತ ಒಂದು ಅಡಿಯಾದರೂ ಉದ್ದವಿರುತ್ತದೆ.

**ಮೀನು ಹಿಡಿಯುವ ವಿಧಾನ:**

ಕೂಂಜೋಲು ಇಟ್ಟು ಮೀನು ಹಿಡಿಯುವ ವಿಧಾನವು ತೋಡುಗಳಲ್ಲಿ, ಕಣಿವೆಗಳಲ್ಲಿ, ಗದ್ದೆಗಳಲ್ಲಿ ನಡೆಸುತ್ತಾರೆ. ಅಕ್ಟೋಬರ್, ನವೆಂಬರ್, ಡಿಸೆಂಬರ್ ತಿಂಗಳಿನಲ್ಲಿ ಈ ವಿಧಾನದಿಂದ ಮೀನು ಹಿಡಿಯುತ್ತಾರೆ. ಅಂದರೆ ಕಣಿ, ತೋಡುಗಳಲ್ಲಿ ನೀರು ಕಡಿಮೆಯಾಗುವ ಸಂದರ್ಭ ಮತ್ತು ಗದ್ದೆಗಳಲ್ಲಿ ನಾಟಿಕಾರ್ಯ ಮುಗಿಯುವ ಸಮಯದಲ್ಲಿ ಇದನ್ನು ಅನುಸರಿಸುತ್ತಾರೆ. ತೋಡು, ಕಣಿಗಳಲ್ಲಿ ನೀರಿನ ಹರಿವು ಕಡಿಮೆಯಾಗುತ್ತಾ ಬರುವ ಸಂದರ್ಭದಲ್ಲಿ ವಿಸ್ತಾರವಾಗಿ ಹರಿಯುವ ನೀರನ್ನು ಅಡ್ಡಕಟ್ಟುತ್ತಾರೆ. ಸಮತಲವಾಗಿ ಹರಿಯುವ ನೀರಾದರೆ ಅಡ್ಡಕಟ್ಟವನ್ನೂ ಎತ್ತರಿಸುತ್ತಾರೆ. ಎತ್ತರಿಸಿ ಒಂದೇ ಕಡೆಯಲ್ಲಿ

ನೀರು ಹರಿಯುವ ಹಾಗೆ ಮಾಡುತ್ತಾರೆ. ಮೇಲ್ಭಾಗದಲ್ಲಿ ಉದ್ದ ಮತ್ತು ಅಗಲವಾದ ಕಲ್ಲನ್ನು ಅಥವಾ ಒಣ ಬೈನೆಮರವನ್ನು ಅದರ ತಿರುಳು ತೆಗೆದು ಅದರಲ್ಲಿ ನೀರು ದೂರಕ್ಕೆ ಹರಿಯುವ ಹಾಗೆ ಮಾಡುತ್ತಾರೆ. ನೀರು ಹರಿದು ಕೆಳಕ್ಕೆ ಬೀಳುವ ಜಾಗದಲ್ಲಿ ಕೂಂಜೋಲನ್ನು ಮೇಲ್ಮುಖವಾಗಿ ಇಟ್ಟು ಅದರ ಕೆಳಭಾಗಕ್ಕೆ ಕೆಲವು ಕಲ್ಲುಗಳನ್ನು ಒರಗಿಸಿ/ತಾಗುವ ಹಾಗೆ ಇಡುತ್ತಾರೆ. ಮೇಲ್ಭಾಗದಿಂದ ಕಟ್ಟದ ನೀರು ಒಂದೇ ಜಾಗದಿಂದ ಹರಿಯುವಾಗ ಸಂಪೂರ್ಣವಾಗಿ ಕೂಂಜೋಲುವಿನ ಒಳಗೆ ರಭಸವಾಗಿ ಬೀಳುತ್ತಿರುತ್ತದೆ. ಕೂಂಜೋಲುವಿನ ಕಡೆಭಾಗಕ್ಕೆ ಕಬ್ಬಿಣದ ಸರಿಗೆಯನ್ನು ಕಟ್ಟಿ ದೂರದ ಮರದ ಬೇರಿಗೆ ಅಥವಾ ಮರಕ್ಕೆ ಕಟ್ಟುತ್ತಾರೆ. ಯಾಕೆಂದರೆ ಅಕ್ಟೋಬರ್, ನವಂಬರ್ ತಿಂಗಳಿನಲ್ಲಿ ಸ್ವಲ್ಪ ಮಟ್ಟಿನ ಮಳೆ ಕರಾವಳಿ ಪ್ರದೇಶದಲ್ಲಿ ಬರುವ ಕಾರಣದಿಂದ ನೀರಿನ ರಭಸಕ್ಕೆ ಕೂಂಜೋಲು ಕೊಚ್ಚಿಕೊಂಡು ಹೋಗುವ ಸಂಭವವಿರುತ್ತದೆ. ಅದಕ್ಕಾಗಿ ಈ ರೀತಿಯಾಗಿ ಸರಿಗೆಯಲ್ಲಿ ಎಳೆದು ಕಟ್ಟುತ್ತಾರೆ. ಗದ್ದೆಯಲ್ಲಿ ಕೊಯಿಲು ಕೆಲಸ ಮುಗಿದ ನಂತರ ಅಥವಾ ನಿರಂತರವಾಗಿ ಬಿಸಿಲು ಬಿದ್ದು ನೀರಿನ ಹರಿವು ಕಡಿಮೆಯಾಗುತ್ತಿದ್ದಾಗ ಗದ್ದೆಗಳಲ್ಲಿ, ಕಣಿ, ತೋಡುಗಳಲ್ಲಿರುವ ಮೀನುಗಳು ನೀರು ಬತ್ತಿ ಹೋಗುವ ಭಯದಿಂದ ನದಿಗಳಿಗೆ ಇಳಿಯುತ್ತಿರುತ್ತವೆ. ಇಂತಹ ಸಂದರ್ಭದಲ್ಲಿ ಇಳಿಯುವ ಮೀನುಗಳು ಕೆಲವು ಗುಂಪು-ಗುಂಪಾಗಿ ಇಳಿದರೆ ಇನ್ನೂ ಕೆಲವು ಒಂದೊಂದಾಗಿ ಇಳಿಯುತ್ತವೆ. ಇಳಿಯುವಾಗ ನೀರು ಒಂದೇ ಕಡೆ ಇಳಿದು ಹೋಗುವ ಜಾಗದಿಂದ ಇಳಿಯುತ್ತವೆ. ಇಂತಹ ಸಂದರ್ಭದಲ್ಲಿ ಮೀನುಗಳು ಕೂಂಜೋಲುಗೆ ಬೀಳುತ್ತವೆ. ಕುಂಜೋಲುಗೆ ಮೀನುಗಳು ಬಿದ್ದಾಗ ಅದರಿಂದ ಹೊರಗೆ ಬರಲಾರದಂತಹ ಸ್ಥಿತಿ ನಿರ್ಮಾಣವಾಗುತ್ತದೆ. ಅಂದರೆ ಮೇಲಿನಿಂದ ನೀರು ನಿರಂತರವಾಗಿ ಕೂಂಜೋಲುಗೆ ಬೀಳುವುದರಿಂದ ಅದು ಅಲ್ಲಿಯೇ ಅಡಿಮೇಲಾಗುತ್ತದೆ. ಹುರುಪೆ ಇರುವ ಮೀನುಗಳಾದರೆ ನೀರಿನ ರಭಸಕ್ಕೆ ಹುರುಪೆ ಎದ್ದು ಬೆಳ್ಳಗಾಗುತ್ತವೆ. ಸಾಧಾರಣ ಗಾತ್ರದ ಹಾವು ಮೀನು ಅಥವಾ ಮಲೆಜ್ಜಿಮೀನು ಕೂಂಜೋಲುಗೆ ಬಿದ್ದರೆ ಅದು ಮಿಸುಕಾಡಿ ಕೂಂಜೋಲು ಅಡ್ಡ ಬೀಳುವ ಸಂದರ್ಭಗಳು ಇರುತ್ತವೆ. ಅದಕ್ಕಾಗಿ ಕೂಂಜೋಲು ಅಡ್ಡಬೀಳದ ಹಾಗೆ ಸಾಧಾರಣ ಗಾತ್ರದ ಕಲ್ಲುಗಳನ್ನು ಇಡುತ್ತಾರೆ.

ಹೆಚ್ಚಾಗಿ ಬೆಳಗ್ಗೆ ಮತ್ತು ಸಂಜೆ ಹೊತ್ತು ಕೂಂಜೋಲು ನೋಡಲು ಹೋಗುತ್ತಾರೆ. ಮೀನು ಹೆಚ್ಚು ಹೊತ್ತು ಅದರಲ್ಲಿ ಇದ್ದರೆ ಸತ್ತು ದುರ್ನಾತ ಬೀರುವ ಸಾಧ್ಯತೆಗಳಿರುತ್ತವೆ. ಹಾಗಾಗಿ ಎರಡು ಹೊತ್ತಿನಲ್ಲಿ ನೋಡಿ ಮೀನಿದ್ದರೆ ತೆಗೆಯುತ್ತಾರೆ. ನಂತರ ಯಥಾಸ್ಥಿತಿಯಲ್ಲಿ ಅದನ್ನು ಇಟ್ಟು ಬರುತ್ತಾರೆ. ಹೆಚ್ಚಾಗಿ ಚಿಕ್ಕ ಜಾತಿಯ ತರು, ಮೊರಂಟೆ, ಬಾಲೆ, ಮುಗುಡು, ಕೈಪೆತರು, ಸೀರ್ಕೊಟೆ, ಓಟೆ ತರು, ಪಾಚೊಳ್ತಿ ಇತ್ಯಾದಿ ಮೀನುಗಳು ಸಿಗುತ್ತವೆ. ಕೆಲವು ಸಂದರ್ಭಗಳಲ್ಲಿ ಆಮೆಯು ಅದಕ್ಕೆ ಬೀಳುವ ಸನ್ನಿವೇಶವೂ ಇರುತ್ತದೆ. ದೊಡ್ಡ ಗಾತ್ರದ ಆಮೆ ಹತ್ತಿ ಹೋಗುತ್ತದೆ. ಸಾಧಾರಣ ಗಾತ್ರದಾಗಿದ್ದರೆ ಅದು ಸಿಗುತ್ತವೆ. ಅನೇಕ ಸಲ ಮೀನಿನ ವಾಸನೆ ಹಿಡಿದು ಬಂದಂತಹ ನೀರು ಹಾವು/ಒಳ್ಳೆ/ನೀರ್ಕಂದಡಿ (ನೀರ್‌ಕಂದೊಡಿ) ಮೀನಿನ ಆಸೆಯಿಂದ ಕೂಂಜೋಲಿಗೆ ಇಳಿದರೆ ಅದು ಕೂಡ ಮೇಲೆ ಬರಲಾರದೆ ಅಲ್ಲೆ ಸಾಯುವ ನಿದರ್ಶನಗಳಿವೆ. ಯಾಕೆಂದರೆ ಮೇಲಿನಿಂದ ನೀರು ರಭಸವಾಗಿ ಬೀಳುವುದರಿಂದ

ನೀರು ಹಾವುಗಳಿಗೆ ತಲೆ ಎತ್ತದ ಸ್ಥಿತಿ ನಿರ್ಮಾಣವಾಗುತ್ತದೆ. ಹಾಗಾಗಿ ಆಹಾರದ ಆಸೆಗಾಗಿ ಬಂದಂತಹ ನೀರು ಹಾವು/ಒಳ್ಳೆ, ನೀರ್ಕಂದಡಿಗಳು ಅತಿ ಆಸೆಯಿಂದ ಪ್ರಾಣವನ್ನೇ ಕಳೆದುಕೊಂಡಂತಹ ನಿದರ್ಶನಗಳು ಇವೆ. ಕೂಂಜೋಲು ಇಟ್ಟು ಮೀನು ಬೇಟೆ ಪ್ರಕ್ರಿಯೆಯು ಬೇಸಿಗೆಯ 3 ತಿಂಗಳಲ್ಲಿ ಮಾತ್ರ ಮಾಡುತ್ತಾರೆ. ಆ ನಂತರ ಕೂಂಜೋಲನ್ನು ಮನೆಯಲ್ಲಿ ಹೊಗೆ ತಾಗುವ ಜಾಗದಲ್ಲಿ ಮುಂದಿನ ವರ್ಷಕ್ಕೆ ಜೋಪಾನವಾಗಿಡುತ್ತಾರೆ.

### 4.5 ಏಂಪೆ ಪಾಡುನ/ಏಪೆ ಪಾಡುನ/ದೀಪುನಿ

ತುಳುಭಾಷೆಯಲ್ಲಿ ಏಂಪೆ ಪಾಡುನ, ಏಪೆ ದೀಪುನ ಎಂದು ಏಪೆ ಹಾಕುವುದಕ್ಕೆ ಬೇರೆ ಬೇರೆ ಪರ್ಯಾಯ ಶಬ್ಧಗಳಿವೆ. ಈ ವಿಧಾನವನ್ನು ಮಳೆಗಾಲದಲ್ಲಿ ಮಾತ್ರ ಅನುಸರಿಸುತ್ತಾರೆ.

**ಏಪೆ ತಯಾರಿಸುವ ವಿಧಾನ:**

ಏಪೆಯನ್ನು ಹೆಚ್ಚಾಗಿ ಬಿದಿರಿನ ಚಿಕ್ಕ ತಳಿಯಾದ/ ಅಥವಾ ಬಿದಿರಿನ ಪ್ರಭೇದಕ್ಕೆ ಸೇರಿದ ಓಟೆಯಿಂದ ತಯಾರಿಸುತ್ತಾರೆ. ಇದೇ ಓಟೆಯನ್ನು ಕೊಳಲು ತಯಾರಿಸಲು ಬಳಸುತ್ತಾರೆ. ಓಟೆಯನ್ನು ಸಣ್ಣದಾಗಿ ಸೀಳಿ ಅದರಲ್ಲಿನ ಒಳಪದರವನ್ನು ತೆಗೆದು ತೆಳುವಾಗಿ ಪರಿವರ್ತಿಸುತ್ತಾರೆ. ಇದನ್ನು 'ಓಟೆದನೆರು' ಎಂದು ಕರೆಯುತ್ತಾರೆ. ಸುಮಾರು 3 ಅಡಿ ಅಗಲದಷ್ಟು ಮತ್ತು 8 ಅಡಿ ಉದ್ದಕ್ಕೆ ಸೀಳಿದ ಓಟೆಯ ನೆರುವನ್ನು ಹೆಣೆಯುತ್ತಾರೆ. ಸಂಪೂರ್ಣ ಆದ ನಂತರ 8 ಅಡಿ ಉದ್ದವನ್ನು ಸಮಪ್ರಮಾಣದಲ್ಲಿ ಜೋಡಿಸಬೇಕು. ಅಂದರೆ 4 ಅಡಿಗಳ ಗಾತ್ರದಷ್ಟು ಜೋಡಿಸುವಾಗ ಎರಡೂ ಅಂಚುಗಳಲ್ಲಿ ಯಾವುದೇ ಕಾರಣಕ್ಕೂ ಚಿಕ್ಕ ತೂತು/ಅಂತರ ಇರಬಾರದು ಜೋಡಿಸಿದಂತಹ ಒಂದು ಭಾಗ ಅಂದರೆ ಅದರ ಬಾಯಿಯು ಅರ್ಧ ಅಡಿಯಷ್ಟು ಮಾತ್ರ ತೆರೆದಿರಬೇಕು. ಮಳೆಗಾಲದಲ್ಲಿ ಮೀನುಗಳು ಮೊಟ್ಟೆ ಇಡಲು ನದಿಯಿಂದ ತೋಡು ಕಣಿಗಳ ಮೂಲಕ ಗದ್ದೆಗಳಿಗೆ, ಕಾಡು ಪ್ರದೇಶ, ಹುಲ್ಲುಗಾವಲಿಗೆ ಹತ್ತುತ್ತವೆ. ತುಳುಭಾಷೆಯಲ್ಲಿ ಉಬೆರ್ ಬಡ್ತುನ ಅಂದರೆ ಕುಂದಾಪುರ ಭಾಷೆಯಲ್ಲಿ ಒಗೆ ಮೀನು ಎಂದು ಕರೆಯುತ್ತಾರೆ. ಒಗೆ ಎಂದರೆ ಎಸೆಯು ಎಂದರ್ಥ. ಶಿವಮೊಗ್ಗ, ತೀರ್ಥಹಳ್ಳಿ ಪ್ರದೇಶದಲ್ಲಿ ಹೊಗೆ ಮೀನು ಎಂದು ಕರೆಯುತ್ತಾರೆ. ಯಾಕೆಂದರೆ ಮಳೆಗಾಲದಲ್ಲಿ ಕೆಲವು ದಿನಗಳಲ್ಲಿ ಹೆಚ್ಚು ಮೀನುಗಳು ಸಿಗುತ್ತವೆ. ಅದನ್ನು ಒಣಗಿಸಲು ಸೂರ್ಯನ ಬಿಸಿಲಿನ ಪ್ರಕಾಶ ಇಲ್ಲದಿರುವುದರಿಂದ ಕೆಳಗೆ ಬೆಂಕಿ ಹಾಕಿ ಒಣಗಿಸುತ್ತಾರೆ. ಅದಕ್ಕೆ ಹೊಗೆ ಮೀನು ಎಂದು ಹೆಸರಿಟ್ಟಿದ್ದಾರೆ.

ಮೊಟ್ಟೆ ಇಡಲು ಹತ್ತುವಂತಹ ಮೀನುಗಳು ಎಂತಹ ನೀರಿನ ಝರಿ ಇದ್ದರೂ ಹಾರಿ ಹತ್ತಿ ಹೋಗುತ್ತವೆ. ಅದಕ್ಕಾಗಿ ಮೀನು ಹಿಡಿಯುವವರು ಸಮತಲವಾಗಿ ಹರಿಯುವ ನೀರನ್ನು ಅಡ್ಡ ಕಟ್ಟ ಕಟ್ಟಿ ಅಂದರೆ ಅಡಿಕೆ ಮರದ ಸಲಾಕೆಯನ್ನು/ಮರದ ಹಲಗೆಯನ್ನು ಬಳಸಿಕೊಂಡು ಎತ್ತರದಿಂದ ಧುಮ್ಮಿಕ್ಕುವ ಹಾಗೆ ಮಾಡುತ್ತಾರೆ. ಕೆಲವೊಂದು ಮೀನು ಹತ್ತಿಕೊಂಡು ಹೋದರೆ ಕೆಲವೊಂದು ಎತ್ತರಕ್ಕೆ ಹಾರಿಕೊಂಡು

ಹೋಗುತ್ತವೆ. ಇಂತಹ ಹೊತ್ತಿನಲ್ಲಿ ನೀರು ಹರಿಯುವ/ಧುಮ್ಮಿಕ್ಕುವ ಕೆಳಭಾಗದಲ್ಲಿ ಈ ಏಪೆಯನ್ನು ಗಟ್ಟಿ ಹಗ್ಗ ಅಥವಾ ಕಬ್ಬಿಣದ ಸರಿಗೆಯಿಂದ ತೂಗು ಹಾಕುತ್ತಾರೆ. ಮೇಲೆ ಹಾರಲು ಯತ್ನಿಸಿರುವ ಮೀನುಗಳು ಈ ಏಪೆಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತವೆ. ಕೆಲವೊಂದು ಮೀನುಗಳು ಎಷ್ಟು ರಭಸವಾಗಿ ನೀರು ಹರಿಯುತ್ತಿದ್ದರೂ ಅದನ್ನು ಲೆಕ್ಕಿಸದೆ ಕಲ್ಲಿನ ಮೇಲೆ ರಭಸವಾಗಿ ಹತ್ತಿಕೊಂಡು ಹೋಗುತ್ತವೆ. ಅದರಲ್ಲೂ 'ಕಲುಂಬುರು' ಅನ್ನುವ ಕಪ್ಪು ಬಣ್ಣದ ಮೀನು ನೀರು ಬೀಳುತ್ತಾ ಇದ್ದರೆ ಅಡಿಕೆ ಮರದ (ಕುಬೆ) ತಲೆ/ತುದಿ ಭಾಗಕ್ಕೂ ಹತ್ತುತ್ತವಂತೆ. ಅಂದರೆ ಅದರ ಬಾಯಿಯು ಇತರ ಮೀನುಗಳ ಹಾಗೆ ಮುಂಭಾಗದಲ್ಲಿ ಇರದೆ ತಲೆ ಅಡಿಭಾಗದಲ್ಲಿದೆ ಮತ್ತು ಅದರ ಬಾಯಿಯ ಭಾಗವನ್ನು ಹಲ್ಲಿಯ ಕಾಲುಬೆರಳುಗಳ ರಚನೆಯ ಹಾಗೆ ಒತ್ತಿ/ಹಿಡಿಯುವ ಸಾಮರ್ಥ್ಯವಿದೆ. ಹಾಗಾಗಿ ಅವು ಕಲ್ಲು ಬಂಡೆಯ ಮೇಲೆ ವೇಗವಾಗಿ ಹತ್ತುತ್ತವೆ. ಕಲುಂಬುರು ಮೀನುಗಳು ವೇಗವಾಗಿ ಕಲ್ಲಿನ ಮೇಲೆ ಹತ್ತಿದ ಹಾಗೆ ಬೇರೆ ಯಾವುದೇ ಮೀನುಗಳು ಹತ್ತುವುದಿಲ್ಲ. ಅಷ್ಟು ಮಾತ್ರವಲ್ಲ ಅಂತಹ ಅವಕಾಶ ಸಿಗದಿದ್ದಾಗ ಮೇಲ್ಭಾಗಕ್ಕೆ ಹಾರುವ ಸಾಮರ್ಥ್ಯವನ್ನು ಅವುಗಳು ಹೊಂದಿರುತ್ತವೆ. ಹಾಗಾಗಿ ಏಪೆಯು ಮಳೆಗಾಲದಲ್ಲಿ ಮಾತ್ರ ಮೀನು ಹಿಡಿಯಲು ಬಳಕೆಯಾಗುವ ಸಾಧನವಾಗಿದೆ. ಓಟೆ ಸ್ವಲ್ಪ ಮೃದುವಾಗಿರುವುದರಿಂದ ಉದ್ದವಾಗಿ ಹೆಣೆದರೂ ಅದನ್ನು ಪುನಃ ಬಾಗಿಸಲು ಸಾಧ್ಯವಾಗುತ್ತದೆ.

## 4.6 ಬಲೆ

ಸರ್ವ ಋತುಗಳಲ್ಲಿ ಬಳಕೆಯಾಗುವ ಬಹುಪಯೋಗಿ ವಸ್ತು ಎಂದರೆ ಬಲೆ. ಆಧುನಿಕ ಕಾಲಘಟ್ಟದಲ್ಲಿ ಬಲೆಯನ್ನು ಯಥೇಚ್ಛವಾಗಿ ಹಳ್ಳಿಗರು ಬಳಸುತ್ತಾರೆ. ಪ್ರಸ್ತುತ ದಿನಗಳಲ್ಲಿ ಬಲೆ ಹಿಡಿದುಕೊಂಡು ಮೀನು ಹಿಡಿಯಲು ಹೋದರೆ ಸ್ವಲ್ಪವಾದರೂ ಮೀನು ಗ್ಯಾರಂಟಿ/ಖಂಡಿತ ಸಿಗುತ್ತದೆ ಎನ್ನುವ ಭಾವನೆ ಬಂದು ಬಿಟ್ಟಿದೆ.

**ಬಲೆಗಳಲ್ಲಿ 4 ವಿಧಗಳಿವೆ**

1. ಬುಡುಬಲೆ– ಬಿಡುವ ಬಲೆ
2. ಗೋರು ಬಲೆ/ಕೋರು ಬಲೆ
3. ಕೂರಿ ಬಲೆ
4. ಬೀಸುಬಲೆ

### 4.6.1 ಬುಡುಬಲೆ/ಬಿಡುಬಲೆ:

ಬುಡುಬಲೆಯನ್ನು ಕಟ್ಪ್ ಬಲೆ ಎಂತಲೂ ಕರೆಯುತ್ತಾರೆ. ಸಾಮಾನ್ಯವಾಗಿ ಬುಡುಬಲೆ/ಬಿಡುವ ಬಲೆಯನ್ನು ನೇಕಾರ ಸಮುದಾಯದವರು ಹಿಂದೆ ಕಟ್ಟುತ್ತಿದ್ದರು. ಬಲೆಯನ್ನು ಆಳ ಮತ್ತು ಉದ್ದದ ಹಿನ್ನೆಲೆಯಲ್ಲಿ ಜೆಲೆ ನಿಗದಿಪಡಿಸುತ್ತಾರೆ. ಹಿಂದಿನ ಕಾಲದಲ್ಲಿ ಬಿಡುಬಲೆಯನ್ನು ನೈಲಾನ್‌ನಿಂದ

ತಯಾರಿಸುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ತಂಗೀಸ್/ಸಂಗೀಸ್, ಪಾಲಿಥೀನ್‌ನಿಂದ ತಯಾರಿಸುತ್ತಾರೆ ಮತ್ತು ಪ್ರಕೃತಿ ಸಹಜವಾದ ವಸ್ತುಗಳನ್ನು ಬಳಸುತ್ತಿದ್ದರು. ಮೇಲೆ ಮತ್ತು ಕೆಳಭಾಗಕ್ಕೆ ಪ್ಲಾಸ್ಟಿಕ್ ಹಗ್ಗದೊಂದಿಗೆ ಕೆಳಭಾಗಕ್ಕೆ ಮಡಕೆ ಮಾಡುವ ಮಣ್ಣಿನಿಂದ ತಯಾರಿಸಿದ ಒಂದು ಇಂಚಿನಷ್ಟು ಉದ್ದ ಮತ್ತು 20 ಸೆಂಟಮೀಟರ್‌ನಷ್ಟು ಸುತ್ತಳತೆ ಹಾಗೂ ಅದರ ಮಧ್ಯದಲ್ಲಿ ರಂಧ್ರವಿರುತ್ತದೆ. ನಾವು ಬಳಸುವ ಪ್ಲಾಸ್ಟಿಕ್ ಹಗ್ಗದ ಗಾತ್ರಕ್ಕೆ ಅನುಗುಣವಾಗಿ ರಂಧ್ರ ಮಾಡುತ್ತಾರೆ. ಮೇಲ್ಭಾಗಕ್ಕೆ ಎಕ್ಕಮಲೆ/ಎಕ್ಕದ ಗಿಡ ಕೋಲನ್ನು ಕಡಿದು ತಂದು ಸಿಪ್ಪೆ ತೆಗೆದು ಒಂದೂವರೆ ಇಂಚಿನಷ್ಟು ತುಂಡು ಮಾಡಿ ಸಾಧಾರಣ ನೆರಳಿನಲ್ಲಿ ಒಣಗಿಸಬೇಕುಅಥವಾ ಗೊಬ್ಬರ ಗಿಡದ/ಗ್ಲಿರಿಸಿಡಿಯಾ ಗಿಡದ ಕೋಲುಗಳನ್ನು ಸಹ ಬಳಸುತ್ತಾರೆ. ಆದರೆ ಬಾಳಿಕೆ ಬರುವುದು ಎಕ್ಕದ ಗಿಡದ ಕೋಲು ಮಾತ್ರ. ಕೆಳಭಾಗಕ್ಕೆ ಮಣ್ಣಿನ ಮಣಿಯನ್ನು 2 ಅಡಿ ಅಂತರಕ್ಕೆ ಪೋಣಿಸಿ ಕಟ್ಟಿಕೊಂಡು ಬರುತ್ತಾರೆ. ತಮಗೆ ಎಷ್ಟು ಉದ್ದ ಬೇಕೋ ಅಷ್ಟು ಉದ್ದದ ಬಲೆಯನ್ನು ಕಟ್ಟುತ್ತಾರೆ. ಬಿಡು ಬಲೆಯನ್ನು ಮಾರು ಲೆಕ್ಕದಲ್ಲಿ ಅಳತೆ ಮಾಡುತ್ತಾರೆ. ಗಿಡದ ಕೋಲು ಮುಳುಗದ ಹಾಗೆ ಕೆಳಭಾಗದಲ್ಲಿರುವ ಮಣ್ಣಿನ ಮಣಿ ಮೇಲೇಳದ ಹಾಗೆ ಬಳಸುತ್ತಾರೆ. ಕೈಬೆರಳಿನ ಗಾತ್ರಕ್ಕೆ ಅನುಗುಣವಾಗಿ ಬಲೆಯ ರಂಧ್ರವನ್ನು ನಿಗದಿ ಮಾಡಿ ಬಲೆಯನ್ನು ಖರೀದಿ ಮಾಡುತ್ತಾರೆ. ಬಿಡುಬಲೆಯನ್ನು ಆಧುನಿಕ ಸಂದರ್ಭದಲ್ಲಿ ನೇಕಾರರು ಮಾತ್ರವಲ್ಲ, ಎಲ್ಲಾ ಸಮುದಾಯದವರು ಬಲೆ ಕಟ್ಟುತ್ತಾರೆ. ಮತ್ತೊಂದು ವಿಶೇಷತೆಯೆಂದರೆ ಮಣ್ಣು ಮತ್ತು ಮರದ ಮಣಿಯ ಬದಲು ಪ್ಲಾಸ್ಟಿಕ್‌ನಿಂದ ತಯಾರಿಸಿದ ಮೇಲ್ಮಣಿ ಮತ್ತು ಸೀಸದಿಂದ ತಯಾರಿಸಿದ ಕೆಳ ಮಣಿಯನ್ನು ಬಳಸುತ್ತಾರೆ. ಅಂದರೆ ಹೆಚ್ಚು ಬಾಳಿಕೆ ಬರುವಂತಹ ಮಣಿಗಳನ್ನು ಬಳಸುತ್ತಾರೆ. ಮಣ್ಣಿನಿಂದ ತಯಾರಿಸಿದ ಮಣಿಯಾದರೆ ನದಿ ತೋಡುಗಳಲ್ಲಿ, ಕಲ್ಲುಗಳಿಗೆ ಸಿಕ್ಕಿ ಪುಡಿಯಾಗುವ ಸಂಭವವಿರುತ್ತದೆ. ಆದುದರಿಂದ ಪ್ರಸ್ತುತ ದಿನಗಳಲ್ಲಿ ಸೀಸ ಮತ್ತು ಪ್ಲಾಸ್ಟಿಕ್ ಮಣಿಯನ್ನು ಬಳಸುತ್ತಾರೆ. ಬುಡು ಬಲೆ/ಬಿಡು ಬಲೆಯನ್ನು ನದಿಗಳಲ್ಲಿ ವಿಸ್ತಾರವಾದ, ಚಿಕ್ಕ ತೋಡುಗಳಲ್ಲಿ ಬಿಡುತ್ತಾರೆ. ಸರ್ವಋುತುಗಳಲ್ಲಿ ಇದನ್ನು ಬಳಸಿ ಮೀನು ಹಿಡಿಯುತ್ತಾರೆ. ಮಳೆಗಾಲದಲ್ಲಾದರೆ 'ಉಬೆರ್' ಹತ್ತುವ ಮೀನುಗಳಿಗೆ, ನದಿಗಳಿಗೆ ತೋಡುಗಳಿಗೆ ಅಡ್ಡಲಾಗಿಯೂ ಬೇಸಿಗೆ ಕಾಲದಲ್ಲಿ ನದಿಗಳಲ್ಲಿ ದೊಡ್ಡ ಗುಂಡಿಗಳಿಗೆ ಅಡ್ಡಲಾಗಿಯೂ ಬಿಡುತ್ತಾರೆ. ಇಂತಹ ಸಂದರ್ಭದಲ್ಲಿ ಸ್ವಲ್ಪ ಮಟ್ಟಿಗೆ ಮೈಲುತುತ್ತು ಅಥವಾ ಬ್ಯಾರಿಬಿತ್ತ್ ಕಡು ಹಾಕುವ ಸಂಭವವಿರುತ್ತದೆ. ನೀರು ಹೆಚ್ಚಿದ್ದರೆ ಕಡು ಹಾಕುವುದಿಲ್ಲ ಮತ್ತು ರಾತ್ರಿ ಹೊತ್ತಿನಲ್ಲಿ ಬಲೆ ಬಿಡುವುದಾದರೆ ಕೆಲವೊಂದು ಸಾರಿ ಮಾತ್ರ ಹರಿಯುವ ನೀರಿಗೆ ಕಡು ಹಾಕುತ್ತಾರೆ. ಕಡು ಹಾಕುವುದು ಮೀನು ಸಾಯಲು ಅಲ್ಲ ಬದಲಾಗಿ ಕಡುವಿನ ಖಾರದಿಂದ ಅಡ್ಡಾದಿಡ್ಡಿ ಓಡಾಡುವ ಮೀನುಗಳು ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳಲಿ ಎಂದು ಈ ರೀತಿ ಮಾಡುತ್ತಾರೆ.

ಕೆಲವೊಂದು ಸಂದರ್ಭಗಳಲ್ಲಿ ಬುಡು ಬಲೆಯನ್ನು ವೃತ್ತಾಕಾರವಾಗಿ ನೀರಿನಲ್ಲಿ ತಿರುಗಿಸಿ ಆ ನಂತರ ಅದನ್ನು ಪರಿಸ್ಪರ ಜೋಡಿಸಿ ಮೀನು ಹಿಡಿಯುವ ವಿಧಾನವನ್ನು ಅನುಸರಿಸುತ್ತಾರೆ. ಈ ರೀತಿ

ಮಾಡುವ ಸಂದರ್ಭದಲ್ಲಿ ಮರಳಿನ ಭಾಗ ಇದ್ದರೆ ಸುಲಭವಾಗುತ್ತದೆ. ಇಲ್ಲವಾದಲ್ಲಿ ಮಧ್ಯದಲ್ಲಿ ಮೀನುಗಳು ಬಲೆಯಿಂದ ತಪ್ಪಿಸಿಕೊಳ್ಳುವ ಸಂಭವವಿರುತ್ತದೆ.

**ಬಣ್ಣ ಕೊಡುವ ವಿಧಾನ:**

ನೈಲಾನ್ ಬಲೆಗಳಿಗೆ ಬಣ್ಣ ಕೊಡುವ ಕ್ರಮವಿದೆ. ಕಾಡಿನಲ್ಲಿ ಸಿಗುವ ಕೆಲವೊಂದು ಮರಗಳ ತೊಗಟೆಯನ್ನು, ಅಂದರೆ ಪೂರ್ಲಿ/ಪುರ್ಲಿ, ದಡ್ಡಲ್ ಮರದ ಚಕ್ಕೆಯನ್ನು ಹಾಗೂ ಕುಡಿದ ಎಳ್ನೀರಿನ ಚಕ್ಕೆಯನ್ನು ತಂದು ಗುದ್ದಿ/ಜಜ್ಜಿ ಅದನ್ನು ದೊಡ್ಡ ಪಾತ್ರೆಯಲ್ಲಿ ಬೇಯಿಸಿ ಕುದಿಸುತ್ತಾರೆ. ನಂತರ ಬಲೆಯನ್ನು ಹದ ಬಿಸಿನೀರಿಗೆ ಹಾಕಿ ಇಡೀ ದಿನ ಇಡುತ್ತಾರೆ. ಈ ರೀತಿ ಮಾಡುವ ಪ್ರಕ್ರಿಯೆಗೆ ತುಳು ಭಾಷೆಯಲ್ಲಿ ಬಲೆಕ್ಕ್ ಕಣೆರ್ ಕೊರ್ಪುನ (ಬಲೆಗೆ ಬಣ್ಣ ಕೊಡುವುದು) ಎಂದು ಕರೆಯುತ್ತಾರೆ. ನೈಲಾನ್ ಬಲೆಯು ನೀರಿನಲ್ಲಿರುವ ಮೀನುಗಳಿಗೆ ಗೋಚರವಾಗುತ್ತದೆ ಅನ್ನುವ ದೃಷ್ಟಿಯಿಂದ ಈ ರೀತಿ ಬಣ್ಣ ಕೊಡುತ್ತಾರೆ. ಆದರೆ ಪ್ಲಾಸ್ಟಿಕ್/ಸಂಗೀಸ್/ ತಂಗೀಸ್ ಬಲೆಗೆ ಬಣ್ಣ ಹಿಡಿಯುವುದಿಲ್ಲ ಮತ್ತು ನೀರಿನ ಬಣ್ಣವನ್ನು ಹೊಂದಿರುವುದರಿಂದ ಮೀನುಗಳಿಗೆ ತಕ್ಷಣ ಬಲೆ ಗೋಚರಿಸುವುದಿಲ್ಲ. ಹಾಗಾಗಿ ಬಲೆಗಳಿಗೆ ಮೀನುಗಳು ಸಿಕ್ಕಿ ಹಾಕಿಕೊಳ್ಳುತ್ತವೆ. ನೀರಿನ ಆಳವಿರುವ ಪ್ರದೇಶದಲ್ಲಿ ಮರ, ಬಿದಿರು, ವಾಹನದ ಟ್ಯೂಬ್‌ಗೆ ಗಾಳಿ ಹಾಕಿ ಅದನ್ನು ಬಳಸುತ್ತಾರೆ. ಈಜುಗಾರಿಕೆಯಲ್ಲಿ ಪ್ರವೀಣರಾಗಿದ್ದರೆ ಈಜಿಕೊಂಡೇ ಬಲೆಯನ್ನು ಬಿಡುತ್ತಾರೆ. ಬಿಡುಬಲೆಯಲ್ಲಿ ಸಿಕ್ಕಿ ಹಾಕಿದಂತಹ ಮೀನುಗಳನ್ನು ಹಾವು ಮೀನುಗಳು, ನೀರಿನಲ್ಲಿರುವ ಏಡಿ, ನೀರ್ನಾಯಿ(ನೀರುನಾಯಿ)ಗಳು ತಿನ್ನುವಂತಹ ಸಂದರ್ಭಗಳಿವೆ. ಇವುಗಳಲ್ಲಿ ಏಡಿ ಮಾತ್ರ ಬಲೆಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತವೆ. ಮೀನಿಗೆ/ಆಹಾರಕ್ಕಾಗಿ ಬಂದು ತನ್ನ ಜೀವ ಕಳಕೊಳ್ಳುವ ಸಂಭವವಿರುತ್ತವೆ. ಆದರೆ ಏಡಿ, ಹಾವು ಮೀನು, ನೀರುನಾಯಿ ಈ ಮೂರು ಜೀವಿಗಳು/ಜಲಚರಗಳು ಬಲೆಯನ್ನು ಹರಿದು ಹಾಕುವ ಸಂಭವವಿರುತ್ತದೆ. ಮತ್ತೊಂದು ಸಂಗತಿ ಏನೆಂದರೆ ಈ ಮೂರು ಜಲಚರಗಳು ಬಲೆಗೆ ಮುತ್ತಿಕೊಂಡರೆ ಆ ನಂತರ ಆ ಬಲೆಯಲ್ಲಿ ಮೀನುಗಳು ಸಿಗುವ ಪ್ರಮಾಣ ಕಡಿಮೆಯಿರುತ್ತದೆ.

### 4.6.2 ಗೋರು ಬಲೆ/ಕೋರ ಬಲೆ

ಕೋರಬಲೆಯನ್ನು ಸರ್ವಋತುಗಳಲ್ಲಿಯೂ ಬಳಸುತ್ತಾರೆ. ಕೋರಬಲೆಯನ್ನು ಹೆಚ್ಚಾಗಿ ನೈಲಾನ್ ನೂಲಿನಿಂದ ತಯಾರಿಸುತ್ತಾರೆ. ಬಿಡುಬಲೆಯ ನೂಲಿಗಿಂತ ಗೋರುಬಲೆಯ ನೂಲು ದಪ್ಪಗಿರುತ್ತದೆ. ಸಾಧಾರಣವಾಗಿ ಕಿರುಬೆರಳಿನ ಗಾತ್ರದಿಂದ ಹೆಬ್ಬೆರಳು ಗಾತ್ರದಷ್ಟು ಅದರ ರಂಧ್ರ (ತುಳುಭಾಷೆಯಲ್ಲಿ ಕಣ್ಣ್ ಎಂದು ಕರೆಯುತ್ತಾರೆ) ಅಗಲವಿರುತ್ತದೆ. ಅಂಗಡಿಯಿಂದ ಖರೀದಿ ಮಾಡಿದ ಬಲೆಯನ್ನು ಅಗಲ ಹೆಚ್ಚು ಇದ್ದು ಉದ್ದ ಅಥವಾ ಆಳ ಕಡಿಮೆ ಇರುವಷ್ಟು ಕತ್ತರಿಸಬೇಕು/ತುಂಡು ಮಾಡುತ್ತಾರೆ. ನದಿ ಅಥವಾ ತೋಡುಗಳಲ್ಲಿರುವ ನೀರಿನ ಆಳ–ಅಗಲಗಳಿಗೆ ಅನುಗುಣವಾಗಿ ಬಲೆಯ ಆಳ–ಅಗಲಗಳನ್ನು ನಿರ್ಧರಿಸುತ್ತಾರೆ. ಇದಕ್ಕೆ ಹಿಡಿ ಗಾತ್ರದ ಬಲೆಯ ಆಳ/ಉದ್ದಕ್ಕೆ ಅನುಗುಣವಾಗಿ ಸಾಮರ್ಥ್ಯವಾಗಿ 2

ಮೀಟರ್‌ನಷ್ಟಾದರೂ ಒಣ ಬಿದಿರಿನ 2 ಕೋಲನ್ನು ಕತ್ತರಿಸಿ ತರುತ್ತಾರೆ. ಮತ್ತು ಒಣ ಅಡಿಕೆ ಮರವನ್ನು ಚಿಕ್ಕ ಸರಳಿನಷ್ಟು ಗಾತ್ರಕ್ಕೆ ಅದನ್ನು ತಯಾರಿಸುತ್ತಾರೆ. ಅಂದರೆ ಬಲೆಯ ರಂಧ್ರದಷ್ಟು ಗಾತ್ರಕ್ಕೆ ಸರಿಹೊಂದುವ ಹಾಗೆ. ಆ ನಂತರ ಅಗಲಕ್ಕೆ ಮೇಲೆ ಮತ್ತು ಕೆಳಗೆ (ಎರಡು ಬದಿಗೆ) ಪ್ಲಾಸ್ಟಿಕ್ ವಯರ್/ಹಗ್ಗವನ್ನು ಬಲೆಗೆ ಪೋಣಿಸಬೇಕು ಮತ್ತು ಆಳದ ಭಾಗಕ್ಕೆ ಎರಡು ಬದಿಗೆ ಅಡಿಕೆ ಮರದ /ಸಲಾಕೆಯಿಂದ ಬಲೆಯನ್ನು ಪೋಣಿಸಬೇಕು. ಬಲೆ ಪೋಣಿಸಿದ ಅಡಿಕೆ ಮರದ ಕೋಲನ್ನು ಬಿದಿರಿನ ಕೋಲಿಗೆ ಜೊತೆಯಾಗಿ ಕಟ್ಟಬೇಕು. ಈ ಕೋರು ಬಲೆಗಳಿಗೆ ಬಿಡುಬಲೆಗಳ ಹಾಗೆ ಅದಕ್ಕೆ ಬಣ್ಣವನ್ನು ಕೊಡಬೇಕು. ಬಿದಿರಿನ ಕೋಲನ್ನು ಆದಷ್ಟು ನಯಗೊಳಿಸಬೇಕು. ಕೈಯಲ್ಲಿ ಹಿಡಿಯುವಾಗ ಯಾವುದೇ ರೀತಿಯಲ್ಲಿ ಕೈಗೆ ತಾಗಬಾರದು ಅನ್ನುವ ದೃಷ್ಟಿಯಿಂದ ಈ ರೀತಿ ಮಾಡುತ್ತಾರೆ. ಪ್ರಸ್ತುತ ದಿನಗಳಲ್ಲಿ ಅಡಿಕೆ ಮರದ ಸಲಾಕೆಯು ನೀರಿನ ರಭಸಕ್ಕೆ ತುಂಡಾಗುತ್ತದೆ ಅನ್ನುವ ಕಾರಣಕ್ಕಾಗಿ ಕಬ್ಬಿಣದ ಅಂದರೆ ವಿದ್ಯುತ್ ಕಂಬಗಳಿಗೆ ಬಳಸುವ ಸ್ಟೇ ವಯರ್ ತಂತಿಯನ್ನು ಬಳಸುತ್ತಾರೆ. ದೀರ್ಘ ಬಾಳಿಕೆಯ ದೃಷ್ಟಿಯಿಂದ ಇದನ್ನು ಬಳಸುತ್ತಾರೆ. ಸರ್ವ ಋತುಗಳಲ್ಲಿ ಮೀನು ಹಿಡಿಯಲು ಕೋರು ಬಲೆಯನ್ನು ಬಳಸುತ್ತಾರೆ. ಮಳೆಗಾಲದಲ್ಲಿ ನದಿಯ ಬದಿಗಳಲ್ಲಿ ದೊಡ್ಡ ತೋಡುಗಳಲ್ಲಿ ನದಿಗಿಂತ ಸಣ್ಣ ಪ್ರಮಾಣದ ತಾರ್‌ಗಳಲ್ಲಿ ಕಡಿಮೆ ಅಂದರೆ 3 ಜನರು ಸೇರಿಕೊಂಡು ಮೀನು ಹಿಡಿಯುತ್ತಾರೆ. ಎರಡು ಜನ ಬಲೆಯನ್ನು ಕೋಲನ್ನು ಹಿಡಿದುಕೊಂಡು ಬಲೆಯನ್ನು ನೀರಿನಲ್ಲಿ ಒಂದು ಭಾಗ ಮುಳುಗಿಸಿ ಮತ್ತೊಂದು ಭಾಗವನ್ನು ನೀರಿನಿಂದ ಸ್ವಲ್ಪ ಎತ್ತರಕ್ಕೆ ಹಿಡಿದುಕೊಂಡು ಮುಂದೆ ಮುಂದೆ ಸಾಗುತ್ತಾರೆ. ಮೀನು ಬಲೆಗೆ ತಾಗಿದಾಗ ತಕ್ಷಣ ಬಲೆ ಕೋರುವವರ ಅರಿವಿಗೆ ಬರುತ್ತದೆ. ತಕ್ಷಣ ನೀರಿನಿಂದ ಮೇಲೆತ್ತಿ 3ನೇ ವ್ಯಕ್ತಿ ಚೀಲವನ್ನು ಹಿಡಿದಿರುತ್ತಾನೆ. ಅವನು ಮೀನು ಹಿಡಿದು ಚೀಲಕ್ಕೆ ಹಾಕುತ್ತಾನೆ. ಕೆಲವೊಂದು ಬಾರಿ ಇಬ್ಬರೇ ಹೋಗಿ ಮೀನು ಹಿಡಿದುಕೊಂಡು ಬರುವ ಸಂದರ್ಭಗಳೂ ಇರುತ್ತವೆ. ಮಳೆಗಾಲದಲ್ಲಿ ಬಲೆಗೋರಿಕೊಂಡು ಹೋಗುವಾಗ, ಎತ್ತರವಾದ ಕಲ್ಲುಗಳು ಸಿಕ್ಕಿ ಕಾಲಿಗೆ ಏಟು ಆಗುವ ಸಂಭವವೂ ಇರುತ್ತದೆ. ಹಾಗೂ ದೊಡ್ಡ ಗಾತ್ರದ ಮೀನು ಸಿಕ್ಕಿದರೆ ಬಲೆಯನ್ನು ಹರಿದು ಹಾಕುವ ಸನ್ನಿವೇಶವೂ ಇರುತ್ತವೆ. ಅಂದರೆ ವೇಗವಾಗಿ ಸಾಗಿ ಬಂದು ಅಷ್ಟೇ ವೇಗವಾಗಿ ಮೀನು ಬೇಟೆಗಾರರು ಹಿಡಿದಿರುವಂತಹ ಬಲೆಗೆ ಡಿಕ್ಕಿ ಹೊಡೆದು ಬಲೆಯನ್ನು ಹರಿದು ಹಾಕುವ ಅನೇಕ ಸಂದರ್ಭಗಳಿವೆ ಎಂದು ಮಾಹಿತಿ ನೀಡಿರುತ್ತಾರೆ.

ಬೇಸಿಗೆ ಕಾಲದಲ್ಲಿ ರಾತ್ರಿ ಹೊತ್ತು ಕೋರು ಬಲೆಯನ್ನು ಬಳಸುತ್ತಾರೆ. ಹೆಚ್ಚಾಗಿ ನದಿಗಳಲ್ಲಿ ಮೀನು ಬೇಟೆಯಾಡುತ್ತಾರೆ. ಸಾಧಾರಣ ನೀರಿರುವ ಭಾಗದಲ್ಲಿ ಟಾರ್ಚ್ ಲೈಟ್ ಅಥವಾ ಬಿದಿರಿನ ದೊಂದಿ ಬೆಳಕನ್ನು ಬಳಸುತ್ತಾರೆ ಹೆಚ್ಚಿನ ಸಂದರ್ಭದಲ್ಲಿ ದೊಂದಿ ಬೆಳಕನ್ನು ಅವಲಂಬಿಸುತ್ತಾರೆ ಯಾಕೆಂದರೆ ದೊಂದಿ ಬೆಳಕಿನಲ್ಲಿ ಮೀನುಗಳಿಗೆ ಸರಿಯಾಗಿ ಕಾಣದೆ ಮಬ್ಬಾಗಿ ಗೋಚರಿಸುವುದರಿಂದ/ ಮರೀಚಿಕೆಯಾಗುವುದರಿಂದ ಮೀನುಗಳು ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ.

**ದೊಂದಿಯನ್ನು ಮಾಡುವ ವಿಧಾನ/ತಯಾರಿಕೆ**

ಸಾಧಾರಣ ಗಾತ್ರದ ಹಸಿಬಿದಿರನ್ನು ತಂದು 2.5 ಅಡಿಯಷ್ಟು ಉದ್ದಕ್ಕೆ ಕತ್ತರಿಸಬೇಕು. ದಪ್ಪ ಭಾಗವನ್ನು ತೆರೆಯಬೇಕು. ಕಬ್ಬಿಣದ ಸರಳಿನಿಂದ ಅದರ ಮಧ್ಯದ ಅಡ್ಡವನ್ನು/ತಡೆಯನ್ನು ತೆಗೆದು ಕೊನೆಯ ತುದಿಭಾಗದ ಮಧ್ಯದ ತಡೆಯನ್ನು ಮಾತ್ರ ಉಳಿಸುತ್ತಾರೆ. ಆ ನಂತರ ಸೀಮೆ ಎಣ್ಣೆಯನ್ನು ಅದರೊಳಗೆ ತುಂಬಿಸಿ ಹಳೆಬಟ್ಟೆಯನ್ನು ಬತ್ತಿಯ ಹಾಗೆ ಒಳಗೆ ಇಳಿಬಿಟ್ಟು ಮೇಲ್ಭಾಗಕ್ಕೆ ದಪ್ಪವಾಗಿರುವಂತೆ ಬಟ್ಟೆಯನ್ನು ಉಂಡೆಯಾಕಾರದಲ್ಲಿ ಸುತ್ತುತ್ತಾರೆ. ದೊಂದಿಯಲ್ಲಿ ಎಣ್ಣೆ ಕಡಿಮೆಯಾಗುತ್ತಿರುವ ಹಾಗೆ ದೊಂದಿಯನ್ನು ಸ್ವಲ್ಪ ಕೆಳಗೆ ಮಾಡಿದರೆ ದೊಂದಿಯು ಮೊದಲಿನ ಹಾಗೆ ಉರಿಯುತ್ತದೆ.

ಮಳೆಗಾಲ ಕಡಿಮೆಯಾದಾಗ ಅಕ್ಟೋಬರ್ ತಿಂಗಳಿನಲ್ಲಿ ಗದ್ದೆ, ಕಣಿವೆ, ತೋಡುಗಳಲ್ಲಿರುವ ಮೀನುಗಳು ಹೆಚ್ಚು ಬಿಸಿಲು ಬಂದು ಕೆಲವು ದಿನಗಳ ಬಳಿಕ ಮಳೆ ಬಂದಾಗ ಆ ದಿನಗಳಲ್ಲಿ ಮೀನುಗಳು ನದಿಗಳಿಗೆ ಇಳಿಯಲಾರಂಭಿಸುತ್ತವೆ. ಇಂಥ ಸಮಯದಲ್ಲಿ ಕೋರಬಲೆಯನ್ನು (ಕಳೆಂಕ್ ನೀರು) ಮಣ್ಣು ಮಿಶ್ರಿತ ಇಳಿಯುವ ಮಳೆ ನೀರಿಗೆ ಅಡ್ಡ ಹಿಡಿಯುತ್ತಾರೆ. ಆಗ ಮೀನುಗಳು ಬಲೆಯಲ್ಲಿ ಸಿಗುತ್ತವೆ. ಈ ಸಮಯದಲ್ಲಿ ಮೀನುಗಳು ಗುಂಪು ಗುಂಪಾಗಿ ಇಳಿಯಲು ಆರಂಭಿಸುವಾಗ ಮೀನುಗಳು ಹೆಚ್ಚು ಸಿಗಲಾರಂಭಿಸುತ್ತವೆ. ಬಲೆ ಹಿಡಿದು ನಿಲ್ಲುವ ಪ್ರಕ್ರಿಯೆಯನ್ನು ಅಕ್ಟೋಬರ್ ತಿಂಗಳಿನಲ್ಲಿ ನದಿಗೆ ಇಳಿಯುವ ಮೀನುಗಳನ್ನು ಮಾತ್ರ ಹಿಡಿಯಲು ಸಾಧ್ಯವಾಗುತ್ತದೆ. ಈ ಸಂದರ್ಭಗಳಲ್ಲಿ ಅಡ್ಡಲಾಗಿ ಹಿಡಿಯುವ ಬಲೆಗಳಲ್ಲಿ ತರಗೆಲೆ, ಕಸ ಕಡ್ಡಿಗಳು ಸಿಕ್ಕಿ ಹಾಕಿಕೊಳ್ಳುತ್ತವೆ. ಇಳಿಯುವ ಮೀನುಗಳು ಬಲೆಗೆ ತಾಗಿದ ತಕ್ಷಣ ಮೀನು ಮತ್ತು ಎಲೆಗಳ ಕಸಕಡ್ಡಿಗಿರುವ ವ್ಯತ್ಯಾಸವನ್ನು ಬೇಟೆಗಾರ ಅರಿತಿರುತ್ತಾನೆ. ಮೀನು ಬಲೆಗೆ ತಾಗಿದ ತಕ್ಷಣ ಚಡಪಡಿಕೆ ಗೊತ್ತಾಗುತ್ತೆ. ಆವಾಗ ಬಲೆಯನ್ನು ನೀರಿನಿಂದ ಮೇಲೆತ್ತಿ ಮೀನುಗಳನ್ನು ಹಿಡಿಯುತ್ತಾರೆ.

### 4.6.3 ಕೂರಿ ಬಲೆ

ಕೋರುವ ಬಲೆಯಲ್ಲಿ ಬಳಸುವ ಬಲೆಯನ್ನೇ ಕೂರಿ ಬಲೆಗೆ ಬಳಸುತ್ತಾರೆ. ವೃತ್ತಾಕಾರವಾಗಿ ಬಿದಿರು ಅಥವಾ ಬೆತ್ತವನ್ನು ಬಗ್ಗಿಸಿ ಅದಕ್ಕೆ ಬಲೆಯನ್ನು ವೃತ್ತಾಕಾರವಾಗಿ ಜೋಡಿಸುತ್ತಾರೆ. ಸಾಧಾರಣ ಒಂದೂವರೆ ಮೀಟರ್‌ನಷ್ಟು ಉದ್ದವಿದ್ದು ತಳಭಾಗದಲ್ಲಿ ರಂಧ್ರ ಇರದ ಹಾಗೆ ಜೋಡಿಸಬೇಕು. ಸಾಧಾರಣ ನೀರಿರುವ ನದಿ, ತೋಡುಗಳಲ್ಲಿ ಬಳಸುತ್ತಾರೆ. ಒಂದು ಕೈ ಅಥವಾ ಎರಡೂ ಕೈಗಳನ್ನು ಬಳಸುವ ಮೂಲಕ ನೀರಿಗೆ ಮುಳುಗಿಸಿ ದೂರದಿಂದ ತಂದು ತಕ್ಷಣ ಮೇಲಕ್ಕೆತ್ತುತ್ತಾರೆ. ಆವಾಗ ಮೀನುಗಳು ಸಿಲುಕಿ ಹಾಕಿಕೊಳ್ಳುತ್ತವೆ.

#### 4.6.4 ಬೀಸು ಬಲೆ:

ಬೀಸು ಬಲೆಯನ್ನು ಹೆಚ್ಚಾಗಿ ಮರಳಿರುವ ನೀರಿನ ಭಾಗದಲ್ಲಿ ಬಳಸಿ ಮೀನು ಹಿಡಿಯುತ್ತಾರೆ. ನಾಲ್ಕೈದು ಮೀಟರ್‌ನಷ್ಟು ಉದ್ದ ಮತ್ತು ಎರಡುವರೆ ಮೀಟರ್‌ನಷ್ಟು ಆಳವಿರುವ ಬಲೆಗೆ ತಳಭಾಗದಲ್ಲಿ ಸೀಸದಂತಹ ಮಣಿವಿರುತ್ತದೆ. ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಹಗ್ಗವಿರುತ್ತದೆ. ಮೀನಿರುವ ಭಾಗಕ್ಕೆ ಬೀಸಿ ನೀರಿಗೆ ಎಸೆಯುತ್ತಾರೆ. ಎಸೆದ ನಂತರ ಮೇಲ್ಭಾಗದ ಹಗ್ಗವನ್ನು ನಿಧಾನಕ್ಕೆ ಎಳೆಯುತ್ತಾ ಬರುತ್ತಾರೆ. ಮೇಲ್ಭಾಗವು ಒಂದಕ್ಕೊಂದು ಕೂಡಿದ ನಂತರ ತಳಭಾಗವನ್ನು ಅದೇ ರೀತಿ ಹಗ್ಗದಿಂದ ನಿಧಾನವಾಗಿ ಎಳೆಯುತ್ತಾರೆ. ಮೇಲ್ಭಾಗ ಮತ್ತು ತಳಭಾಗ ಒಟ್ಟಾಗಿ ದಡಕ್ಕೆ ಎಳೆದು ತರುತ್ತಾರೆ. ಈ ರೀತಿ ಆದ ನಂತರ ಅದರ ಮಧ್ಯದಲ್ಲಿರುವ ಮೀನುಗಳೆಲ್ಲವು ಓಡಲಾರದೆ ಸಿಕ್ಕಿ ಹಾಕಿಕೊಳ್ಳುತ್ತವೆ. ಈ ವಿಧಾನವನ್ನು ತೋಡು, ನದಿಗಳಲ್ಲಿ ಅನುಸರಿಸುತ್ತಾರೆ. ಆದರೆ ಹೆಚ್ಚು ಕಲ್ಲುಗಳಿರುವ ಜಾಗದಲ್ಲಿ ಈ ರೀತಿಯ ಮೀನು ಬೇಟೆಗಾರಿಕೆ ಅಸಾಧ್ಯವಾಗಿದೆ.

### 4.7 ಒಣ ಅಡಿಕೆ ಮರ/ಟೊಳ್ಳುಮರ/ಬಿದಿರು

ಒಣ ಅಡಿಕೆ ಮರದ ಒಳಗಿರುವ ತಿರುಳನ್ನು ತೆಗೆದು ಒಂದು ಕಡೆ ಮುಚ್ಚಿ ನೀರಿನಲ್ಲಿ ಹಾಕುತ್ತಾರೆ. ಅದೇ ರೀತಿ ಸಾಧಾರಣ ಗಾತ್ರವಿರುವ ಟೊಳ್ಳುಮರವನ್ನು ಒಂದು ಕಡೆ ಮಾತ್ರ ತೆರೆದಿರುವ ಹಾಗೆ ನೀರಿನಲ್ಲಿ ಹಾಕುತ್ತಾರೆ. ಉದ್ದವಾದ ಮತ್ತು ದಪ್ಪವಾಗಿರುವ ಬಿದಿರನ್ನು ಅಲ್ಲಲ್ಲಿ ಒಂದೊಂದು ಸಾಧಾರಣ ಗಾತ್ರದ ತೂತು ಮಾಡಿ ಬಿದಿರಿನೊಳಗೆ ಎರೆಹುಳ ಇನ್ನಿತರ ಆಹಾರ ವಸ್ತುವನ್ನು ಹಾಕಿ ನೀರಿನಲ್ಲಿ ಇಡುತ್ತಾರೆ. ಒಂದು ದಿನ ಬಿಟ್ಟು ಅದನ್ನು ನೀರಿನಿಂದ ಮೇಲಕ್ಕೆತ್ತಿ ಅದರಲ್ಲಿರುವ ಮೀನುಗಳನ್ನು ಹಿಡಿಯುತ್ತಾರೆ. ಸಾಮಾನ್ಯವಾಗಿ ಆಹಾರ ಅರಸಿಕೊಂಡು ಬಂದಿರುವ ಪುರಿಯೋಲು ಮೀನುಗಳು, ಸೀಕೋರ್ಟ, ಬಾಲೆ ಮೀನುಗಳು ಸೇರಿದಂತೆ ವಿವಿಧ ಜಾತಿಯ ಮೀನುಗಳು ಅಡಿಕೆ ಮರ ಅಥವಾ ಟೊಳ್ಳು ಮರಗಳಲ್ಲಿ, ಬಿದಿರುಗಳ ತೂತುಗಳಲ್ಲಿ ಸೇರಿಕೊಳ್ಳುತ್ತವೆ ಮತ್ತು ಮೇಲೆ ಉಲ್ಲೇಖಿಸಿದ ಮೀನುಗಳು ನೀರಿನೊಳಗೆ ಬಿಲವನ್ನು ಆಶ್ರಯಿಸಿ ಬದುಕುವುದರಿಂದ ಮನುಷ್ಯ ಕುತಂತ್ರವನ್ನು ಅರಿಯದಂತಹ ಮೀನುಗಳು ಇಂತಹ ವಸ್ತುಗಳೆಡೆಯಲ್ಲಿ ಸೇರಿಕೊಂಡು ತನ್ನ ಪ್ರಾಣವನ್ನು ಕಳೆದುಕೊಳ್ಳುವ ಸಂಭವವಿರುತ್ತದೆ.

### 4.8 ಬಟ್ಟಲು ಇಡುವುದು

ಒಂದು ಸಾಧಾರಣ ಬಟ್ಟಲಿನಲ್ಲಿ ಆಹಾರವನ್ನು/ಅನ್ನ ತಿಂಡಿಯನ್ನು ಇಟ್ಟು ಬಟ್ಟೆಯನ್ನು ಕಟ್ಟಿ ಬಟ್ಟಲನ್ನು ನೀರಿನಲ್ಲಿಡಬೇಕು. ಬಟ್ಟೆಯಲ್ಲಿ ಸಣ್ಣ ತೂತು ಮಾಡುತ್ತಾರೆ. ಆಹಾರವನ್ನು ಅರಸಿಕೊಂಡು ಬರುವ ಸಣ್ಣ ಗಾತ್ರದ ತರು ಮೀನುಗಳು ತೂತಿರುವ ಬಟ್ಟೆಯೊಳಗೆ ನುಗ್ಗಿ ಬಟ್ಟಲನ್ನು ಸೇರುತ್ತವೆ ಆವಾಗ ತಕ್ಷಣ ಬಟ್ಟಲನ್ನು ನೀರಿನಿಂದ ಮೇಲಕ್ಕೆತ್ತಿದಾಗ ಅದರಲ್ಲಿರುವ ಮೀನುಗಳು ಸಿಗುತ್ತವೆ.

**4.9 ಭರ್ಚಿ ಹಾಕುವುದು:**

ವಸ್ತು ಪರಿಕರವನ್ನು ಬಳಸಿಕೊಂಡು ಮೀನು ಬೇಟೆಗಾರಿಕೆಯಲ್ಲಿ ಭರ್ಚಿ ಹಾಕುವ ವಿಧಾನವು ಒಂದು. ಭರ್ಚಿ ಹಾಕಿ ಮೀನು ಹಿಡಿಯುವ ವಿಧಾನವನ್ನು ಪುತ್ತೂರು ತಾಲೂಕಿನ ಉದನೆ, ಶಿರಾಡಿ ಈ ಪ್ರದೇಶಗಳಲ್ಲಿ ಅನುಸರಿಸುತ್ತಾರೆ. ಭರ್ಜಿ/ಭರ್ಚಿಯು ತ್ರಿಶೂಲವನ್ನು ಹೋಲುತ್ತದೆ. ಒಂದು ಅಡಿಯಷ್ಟು ಉದ್ದವಿರುತ್ತದೆ. ತ್ರಿಶೂಲಕ್ಕೆ ಹಿಂಬದಿಗೆ ಬೆತ್ತ, ಮರವನ್ನು ಹಿಡಿಯನ್ನಾಗಿ ಬಳಸುತ್ತಾರೆ. ಹಿಡಿಯು 3 ಅಡಿಯಷ್ಟಾದರೂ ಉದ್ದವಿರುತ್ತದೆ. ತ್ರಿಶೂಲದ ಹಿಂಭಾಗವು ಕೊಳವೆಯಾಕರದಲ್ಲಿರುತ್ತದೆ. ಮರ, ಬೆತ್ತವನ್ನು ಸೇರಿಸಲು ಈ ರೀತಿ ಕೊಳವೆಯಕಾರವಿರುತ್ತದೆ. ರಾತ್ರಿ ಹೊತ್ತಿನಲ್ಲಿ ನೀರಿನ ಆಳದಲ್ಲಿರುವ ಮೀನನ್ನು ಹಿಡಿಯಲು ಬಳಸುತ್ತಾರೆ.

**ಬೇಟೆ ವಿಧಾನ:**

ತೂಟೆಯನ್ನು ಹಿಡಿದುಕೊಂಡು ರಾತ್ರಿ ಹೊತ್ತಿನಲ್ಲಿ ಮೀನು ಬೇಟೆಯಾಡುವ ಸಂದರ್ಭದಲ್ಲಿ ನೀರಿನ ಆಳದಲ್ಲಿ ಕಾಣಸಿಗುವ ಮೀನುಗಳಿಗೆ ಭರ್ಚಿಯನ್ನು ಉಪಯೋಗಿಸುತ್ತಾರೆ. ತೂಟೆಯ ಬೆಳಕಿಗೆ ಸಾಧಾರಣ ನೀರಿನ ಆಳದಲ್ಲಿರುವ ಮೀನುಗಳಿಗೆ ಕಣ್ಣು ಮಬ್ಬು ಕವಿದಂತಾಗಿ ಅವು ಮಲಗಿದ್ದಲ್ಲಿಯೇ/ ಇದ್ದಲ್ಲಿಯೇ ಹಾಗೆಯೇ ಇರುತ್ತದೆ. ಇಂತಹ ಸಂದರ್ಭದಲ್ಲಿ ಮೂರು ಕವಲುಗಳುಳ್ಳ ಭರ್ಚಿಯಿಂದ ವೇಗವಾಗಿ ಹೊಡೆಯುತ್ತಾರೆ. ಭರ್ಚಿಯು ಒಂದು ಅಡಿಯಷ್ಟು ಮುಂಭಾಗ ಕಬ್ಬಿಣವಾಗಿರುವುದರಿಂದ ನೇರವಾಗಿ ಮೀನಿಗೆ ತಾಗುತ್ತದೆ ಮತ್ತು 3 ಕವಲುಗಳಿರುವುದರಿಂದ ಯಾವುದಾದರೂ ಒಂದು ಕವಲು ಚುಚ್ಚಿಕೊಳ್ಳುತ್ತದೆ ಅಥವಾ ತಾಗುತ್ತದೆ. ಈ ಸಂದರ್ಭದಲ್ಲಿ ಕೆಲವು ಮೀನುಗಳು ಭರ್ಚಿಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತದೆ. ಇನ್ನು ಕೆಲವು ಮೀನುಗಳು ಭರ್ಚಿಗೆ ತಾಗಿ ಅಲ್ಲೇ ಬೀಳುತ್ತವೆ.

## 4.10 ಇತರ ವಿಧಾನ

### 4.10.1 ಮೀನು ಹಿಡಿಯುವ ಜಾತ್ರೆ

ದಕ್ಷಿಣ ಕನ್ನಡದ ಎರಡು ಕಡೆಗಳಲ್ಲಿ ಮೀನು ಹಿಡಿಯುವ ಜಾತ್ರೆ ನಡೆಯುತ್ತದೆ. ಬಪ್ಪನಾಡು ಜಾತ್ರೆ ಮತ್ತು ಪಾವಂಜೆ ಇಲ್ಲಿ ಮೀನು ಹಿಡಿಯುವ ಜಾತ್ರೆ ನಡೆಯುತ್ತದೆ. ಬಪ್ಪನಾಡು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ ಜಾತ್ರೆ ಎಪ್ರಿಲ್ ತಿಂಗಳಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ಚಿತ್ರಾಪು ಅನ್ನುವ ಸ್ಥಳದಲ್ಲಿ ಮತ್ತು ಪಾವಂಜೆ ಕಂಡೇವು ಸುಬ್ರಹ್ಮಣ್ಯ ದೇವಸ್ಥಾನ ಜಾತ್ರಾ ಸಂದರ್ಭದಲ್ಲಿ ಮೀನು ಹಿಡಿಯುವ ಜಾತ್ರೆ ನಡೆಯುತ್ತದೆ. ಇಲ್ಲಿ ಕೋರುಬಲೆ, ಕೂರಿ ಬಲೆ, ಬೀಸು ಬಲೆಯನ್ನು ಬಳಸಿಕೊಂಡು ಮೀನು ಹಿಡಿಯುತ್ತಾರೆ. ಬೆಳಗ್ಗೆ 5.30 ದಿಂದ ಮಧ್ಯಾಹ್ನ 11 ಗಂಟೆಯವರೆಗೆ ಮೀನು ಹಿಡಿಯುತ್ತಾರೆ. ಇಲ್ಲಿಗೆ ಜನರು ಬೇರೆ ಬೇರೆ ಊರುಗಳಿಂದ/ವಿವಿಧೆಡೆಯಿಂದ ಬಂದು ಮೀನು ಹಿಡಿಯುವ ಜಾತ್ರೆಯಲ್ಲಿ

ಹಾಲ್ಗೊಳ್ಳುತ್ತಾರೆ. ಯಾವುದೇ ರೀತಿಯ ನಿರ್ಬಂಧ, ಶುಲ್ಕ ಇರುವುದಿಲ್ಲ. ಆದರೆ ನಿಗದಿಪಡಿಸಿದ ದಿನಾಂಕ ಹೊರತುಪಡಿಸಿ ಉಳಿದ ದಿನಾಂಕಗಳಲ್ಲಿ ಮೀನು ಹಿಡಿಯಲು ಅವಕಾಶವಿರುವುದಿಲ್ಲ.

### 4.10.2 ಪಲ್ಲ ಚೇಪುನ/ಏಪುನ/ತೇಪುನ

ತುಳು ಭಾಷೆಯಲ್ಲಿ ಪಲ್ಲ ಅಂದರೆ ಹಳ್ಳ ಎಂದರ್ಥ. ಭಾಷಾ ದೃಷ್ಟಿಯಿಂದ ಇದನ್ನು ನಿರೂಪಿಸುವುದಾದರೆ ತುಳುಭಾಷೆಯಲ್ಲಿ ಪಕಾರವಿದ್ದುದು, ಕನ್ನಡ ಭಾಷೆಯಲ್ಲಿ ಹಕಾರವಾಗುತ್ತದೆ. ಉದಾ: ಕನ್ನಡದ ಹಕ್ಕಿ–ಪಕ್ಕಿ, ಹಳ್ಳ–ಪಲ್ಲ, ಹಣ್ಣು–ಪಂರ್ದ್ ಇತ್ಯಾದಿ ವ್ಯತ್ಯಾಸಗಳಾಗುತ್ತವೆ.

ಪಲ್ಲ ತೇಪುನ ಅಂದರೆ ಹಳ್ಳದ ನೀರನ್ನು ಖಾಲಿ ಮಾಡುವುದು. ಹಳ್ಳದ ನೀರನ್ನು ಖಾಲಿಮಾಡುವಾಗ ಮೊದಲು ನೀರಿನ ಹರಿವನ್ನು ಕಡಿಮೆ ಅಥವಾ ಸಂಪೂರ್ಣ ಬಂದ್ ಮಾಡುತ್ತಾರೆ. ಆ ನಂತರ ಅಡಿಕೆ ಮರದ ಹಾಳೆ, ಸಾಧಾರಣ ಅಗಲವಾದ ಮರದ ಚಕ್ಕೆ/ತೊಗಟೆ ಅಥವಾ ಈಚಲು/ಬೈನೆ ಮರದ ಕೈಯನ್ನು ಅಂದರೆ ಮರಕ್ಕೆ ತಾಗಿಕೊಂಡಿರುವ ಅಡಿಕೆ ಮರದ ಹಾಳೆಯ ಹಾಗಿರುವ ಭಾಗವನ್ನು ಬಳಸಿಕೊಂಡು ನೀರನ್ನು ಖಾಲಿ ಮಾಡುತ್ತಾರೆ. ನೀರು ಖಾಲಿ ಮಾಡುವಾಗ ನೀರು ಬೀಳುವ ಜಾಗಕ್ಕೆ ಮಕ್ಕೆರಿ/ಮಂಕರಿಯನ್ನು ಇಡುತ್ತಾರೆ. ಯಾಕೆಂದರೆ ನೀರಿನ ಜೊತೆಗೆ ಸಣ್ಣ ಗಾತ್ರದ ಮೀನುಗಳು ಹೋಗುತ್ತವೆ ಅನ್ನುವ ಕಾರಣಕ್ಕೆ. ಸಂಪೂರ್ಣವಾಗಿ ಗುಂಡಿಯು ನೀರು ಖಾಲಿಯಾದ ನಂತರ ಗುಂಡಿಯಲ್ಲಿರುವ ಮೀನು, ಏಡಿಯನ್ನು ಹಿಡಿಯುತ್ತಾರೆ. ಈ ರೀತಿ ಹಿಡಿಯುವುದರಿಂದ ನೀರಿನ ಮೇಲ್ಭಾಗದಲ್ಲಿ ಹರಿದಾಡುವ/ಓಡಾಡುವ ಮೀನಿಗಿಂತ ನೀರಿನ ಅಡಿಭಾಗದಲ್ಲಿ ಸಂಚರಿಸುವ ಮೀನುಗಳು ಸಂಪೂರ್ಣವಾಗಿ ಸಿಗುತ್ತವೆ ಮತ್ತು ಸಿಗಡಿಗಳು ಸಹ ಸಿಗುತ್ತವೆ.

### 4.10.3 ಪುಂಡಿದ ಕಲ:

ಅಕ್ಟೋಬರ್, ನವೆಂಬರ್ ತಿಂಗಳಿನಲ್ಲಿ ಮಳೆ ಕಡಿಮೆಯಾಗಿ, ನೀರು ಕಡಿಮೆಯಾಗುವಾಗ ನದಿ ಅಥವಾ ತೋಡುಗಳ ಮಧ್ಯದಲ್ಲಿ ಮರಳಿರುವ ಜಾಗದಲ್ಲಿ ಮರಳನ್ನು ತೆಗೆದು ಗುಂಡಿಯನ್ನು ತೋಡುತ್ತಾರೆ. ಅದಕ್ಕೆ/ಆ ಗುಂಡಿಗೆ ನೀರು ಹಾಯಿಸುತ್ತಾರೆ. ನೀರು ಒಳಬರಲು ಮತ್ತು ಹೊರಹೋಗಲು ಮಾತ್ರ ಅವಕಾಶ ಇರಬೇಕು. ಉಳಿದ ಭಾಗವನ್ನು ತೆಂಗಿನ ಗರಿಯಿಂದ ಮಾಡಿದಂತಹ ತಟ್ಟಿಯನ್ನು ಎಡಬದಿಗೆ ಎಡ/ಬಲ ಬದಿಗೆ ಕಟ್ಟುತ್ತಾರೆ. ಆ ನಂತರ ನೀರಿನ ಪ್ರವೇಶ ಮತ್ತು ಹೊರ ಹೋಗುವಿಕೆ ಭಾಗಕ್ಕೆ ಅಗಲವಾದ ಕಲ್ಲನ್ನು ರೆಡಿ ಮಾಡಿ ಇಟ್ಟುಕೊಂಡಿರುತ್ತಾರೆ. ಸಂಜೆ ಹೊತ್ತು 'ಅತಿಕಾರೆ' ಅನ್ನುವ ಭತ್ತವನ್ನು ಹುರಿದು ಗುದ್ದಿ, ತೆಂಗಿನ ಕಾಯಿಯ ಹಿಂಡಿ, ಸೆಗಣಿ ಮಿಶ್ರಣ ಮಾಡಿ ತೋಡಿದ ಗುಂಡಿಯೊಳಗೆ ಇಡುತ್ತಾರೆ. ಇಟ್ಟಂತಹ ಆಹಾರದ ಪರಿಮಳಕ್ಕೆ ರಾತ್ರಿ ಹೊತ್ತು ಮೀನುಗಳು ಧಾವಿಸಿ ಬರುತ್ತವೆ. ಬೆಳಗ್ಗಿನ ಜಾವ ಹೋಗಿ, ನೀರಿನ ಒಳ ಹರಿವಿಗೆ ತಕ್ಷಣ ಅಗಲವಾದ ಕಲ್ಲನ್ನಿಟ್ಟು ಮುಚ್ಚುತ್ತಾರೆ. ನಂತರ ಬಲೆ, ಬಟ್ಟೆಯನ್ನು ಬಳಸಿಕೊಂಡು ಅದರೊಳಗಿರುವ ಮೀನು ಹಿಡಿಯುತ್ತಾರೆ. ಕೆಳ ಭಾಗದಲ್ಲಿ

ನೀರಿನ ಜೊತೆಗೆ ಮೀನುಗಳು ಹಾರಿ ಹೋಗದ ಹಾಗೆ ಕೆಳ ಭಾಗದಲ್ಲಿ ಅಡ್ಡಲಾಗಿ ಅಗಲವಾದ ಕಲ್ಲನ್ನಿಟ್ಟು ತಡೆಯೊಡ್ಡುತ್ತಾರೆ. ಈ ಭಾಗದಲ್ಲಿ ಉಲ್ಲೇಖಿಸಿದ 'ಅತಿಕಾರೆ' ಅನ್ನುವುದು ತುಳುವರ ಸತ್ಯದ ಭತ್ತದ ತಳಿ ಎಂಬ ನಂಬಿಕೆ ಇದೆ. ತುಳುಭಾಷೆಯ ಸಿರಿ ಮಹಾಕಾವ್ಯದಲ್ಲಿ ಅತಿಕಾರೆ ಬೆಳೆಯ ಉಲ್ಲೇಖವಿದೆ.

### 4.10.4 ಸೂಟೆ/ತೂಟೆ ಮೀನ್

ರಾತ್ರಿ ಹೊತ್ತಿನಲ್ಲಿ ಸೂಟೆ/ತೂಟೆ ಹಿಡಿದುಕೊಂಡು ಮೀನು ಹಿಡಿಯುವುದಕ್ಕೆ ಸೂಟೆ ಮೀನ್/ಮೀನು ಹಿಡಿಯಲು ಹೋಗುವುದು ಎಂದು ಕರೆಯುತ್ತಾರೆ. ತುಳುಗಾದೆಯಲ್ಲಿ ಉಲ್ಲೇಖ ಆಗಿರುವ ಹಾಗೆ ತೂಟೆದ ಮೀನುಗ್ ಬರಿ ರುಚಿಗೆ(ಸೂಟೆ ಮೀನಿಗೆ ಭಾರಿ ರುಚಿಯಂತೆ)

**ತೂಟೆ ತಯಾರಿಸುವ ವಿಧಾನ:**

ತೂಟೆ ಅಂದರೆ ಬೆಳಕಿನ ಒಂದು ಪರಿಕರ. ಈ ಪರಿಕರವನ್ನು ತೆಂಗಿನ ಮರದ ಒಣ ಗರಿ, ಒಣ ಅಡಿಕೆ ಮರವನ್ನು ತೆಳ್ಳಗೆ ಸೀಳಿ ಅದರಿಂದ ತಯಾರಿಸುತ್ತಾರೆ. ಒಂದು ಕೈಯ್ಯಲ್ಲಿ ಹಿಡಿದುಕೊಳ್ಳುವಷ್ಟು ಹಿಡಿ ಗಾತ್ರದಷ್ಟು ಅಡಿಕೆ ಮರದ ಹಾಳೆ ಅಥವಾ ಇತರ ಯಾವುದೇ ಬಳ್ಳಿಯನ್ನು ಕಟ್ಟಲು ಬಳಸುತ್ತಾರೆ. ಬೇಸಿಗೆಕಾಲ, ಮಳೆಗಾಲ ಆರಂಭದ ದಿನಗಳಲ್ಲಿ ಈ ವಿಧಾನವನ್ನು ಅನುಸರಿಸಿಕೊಂಡು ಮೀನು ಹಿಡಿಯುತ್ತಾರೆ. ರಾತ್ರಿ ಹೊತ್ತು ನೀರಿನಲ್ಲಿ ಬದಿಗೆ ಬರುವ ಮೀನುಗಳಿಗೆ ಬೆಂಕಿ ಬೆಳಕಿನಲ್ಲಿ ಕಣ್ಣು ಮಂಜಾಗುತ್ತದೆ. ಆವಾಗ ಮೀನುಗಳು ಓಡಾಡದೆ ಇದ್ದಲ್ಲಿಯೇ ಇರುತ್ತವೆ. ಆವಾಗ ಉದ್ದವಾದ ಕತ್ತಿಯನ್ನು ಬಳಸಿಕೊಂಡು ಕಡಿಯುತ್ತಾರೆ. ಮೀನಿಗೆ ತಾಗಿ ಮೀನು ಸಾಯುತ್ತವೆ. ಬೇಸಿಗೆ ಕಾಲದಲ್ಲಿ ಈ ರೀತಿಯಾದರೆ ಮಳೆಗಾಲದಲ್ಲಿ ಒಸರು ನೀರಿಗೆ ತೋಡು/ಕಣಿಗಳಿಗೆ ಹತ್ತುವ/ಉಬೆರ್/ ಮೀನುಗಳನ್ನು ಈ ರೀತಿ ಬೇಟೆಯಾಡುತ್ತಾರೆ.

# ಅಧ್ಯಾಯ–5

# ಸ್ಫೋಟಕಗಳ ಬಳಕೆ

## ಅಧ್ಯಾಯ-5

# ಸ್ಫೋಟಕಗಳ ಬಳಕೆ

ಆಧುನಿಕ ಸಂದರ್ಭಗಳಲ್ಲಿ ವಿವಿಧ ರೀತಿಯ ಸ್ಫೋಟಕಗಳನ್ನು ಬಳಸಿ ಮೀನು ಹಿಡಿಯುವ ಪ್ರವೃತ್ತಿಯು ಇದೆ. ಆದರೆ ಕಾನೂನು ರೀತಿಯಲ್ಲಿ ಈ ವಿಧಾನವು ಅಪರಾಧವೆನಿಸುತ್ತವೆ. ಒಂದು ಕಾರಣ ಸ್ಫೋಟಕಗಳ ಬಳಕೆ ನಿಷೇಧ ಮತ್ತೊಂದು ಕಾರಣ ಅದನ್ನು ಬಳಸುವುದರಿಂದ ಮನುಷ್ಯರಿಗೆ ಪ್ರಾಣ ಹಾನಿಯಾಗುವ ಸಂಭವವಿರುವುದರಿಂದ. ಆದರೂ ಅಧ್ಯಯನ ದೃಷ್ಟಿಯಿಂದ ಮಾತ್ರ ಅದನ್ನು ವಿವೇಚಿಸಲಾಗಿದೆ.



## 5.1 ಗ್ರೆನೇಡ್ ಬಳಕೆ/ತೋಟೆ ಬಳಕೆ

ತುಳು ಭಾಷೆಯಲ್ಲಿ ಗ್ರೆನೇಡ್ ಬಳಸಿ ಮೀನು ಹಿಡಿಯುವ ವಿಧಾನವನ್ನು **'ತೋಟೆ' ಪಾಡುನ** ಎಂದು ಕರೆಯುತ್ತಾರೆ. ಗ್ರೆನೇಡ್ ಹಾಕುವ ಸಂದರ್ಭದಲ್ಲಿ ತೋಟೆ, ಬತ್ತಿ, ಕೇಪು ಈ ಮೂರು ವಸ್ತುಗಳು ಅಂಗಡಿಯಲ್ಲಿ ದೊರೆಯುತ್ತವೆ. ಒಂದು ಇಡೀ ಉದ್ದದ ತೋಟೆಯಲ್ಲಿ 4 ತುಂಡುಗಳಾಗಿ ವಿಭಾಗಿಸಿ ಭಾಗ ಮಾಡುತ್ತಾರೆ. 4 ತುಂಡುಗಳಿಗೆ 4 ಕೇಪು ಕೊಡುತ್ತಾರೆ ಮತ್ತು ಅದಕ್ಕೆ ಸಮನಾದ ಬತ್ತಿಯನ್ನೂ ಕೊಡುತ್ತಾರೆ. ತುಂಡು ಮಾಡಿದ ತೋಟೆ(ಗ್ರೆನೇಡ್)ಗೆ ಯಾವುದಾದರೂ ಕಡ್ಡಿಯಿಂದ ತೋಟೆಯನ್ನು ಆಳ ಮಾಡುತ್ತಾರೆ. ಸಾಮಾನ್ಯವಾಗಿ ತೋಟೆಯು ಹಸಿ ಮರಳನ್ನು ಹೋಲುತ್ತದೆ. ಆಳ ಮಾಡಿದ ತೋಟೆಗೆ ಬತ್ತಿಯನ್ನು ಸೇರಿಸಿದ ಕೇಪನ್ನು ಜೋಡಿಸಿ ಪೇಪರಿನಿಂದ ಸುತ್ತುತ್ತಾರೆ. ನಂತರ ಒಂದೂವರೆ ಇಂಚಿನಷ್ಟು ಉದ್ದದ ಬೆರಳಿನಾಕಾರದ ಚಿಕ್ಕ ಕಲ್ಲನ್ನು ಜೊತೆಯಾಗಿ ತೋಟೆಗೆ ನದಿ ದಡದಲ್ಲಿ ಸಿಗುವ ಹಗ್ಗ ಅರಿಕೆ, ಕುಯ್ಯಲ ಅಥವಾ ಸೆಣಬಿನ ನಾರಿನಿಂದ ತಯಾರಿಸಿದ ಹಗ್ಗವನ್ನು ಸೇರಿಸಿ ಗಟ್ಟಿಯಾಗಿ ಕಟ್ಟುತ್ತಾರೆ. ಕಲ್ಲನ್ನು ಕಟ್ಟುವ ಮುಖ್ಯ ಉದ್ದೇಶವೆಂದರೆ ಗ್ರೆನೇಡ್ ನೀರಿನಾಳಕ್ಕೆ ಇಳಿಯಬೇಕು ಮತ್ತು ಭಾರ ಇಲ್ಲದಿದ್ದರೆ ನೀರಿನ ಮೇಲೆ ಬಂದು ಸಿಡಿಯುವ ಸಾಧ್ಯತೆ ಇರುತ್ತದೆ. ಮೇಲೆ ಬರಲು ಮುಖ್ಯ ಕಾರಣವೆಂದರೆ ಬತ್ತಿಯು ಉರಿಯುತ್ತಾ ನೀರಿನ ಆಳಕ್ಕೆ ಇಳಿಯುವುದರಿಂದ ಭಾರ ಕಡಿಮೆ ಇದ್ದಾಗ ಅದು ಹೊಗೆ ಹೋಗುವ/ಹೊರಹಾಕುವಾಗ ಕೆಳಮುಖ ಒತ್ತಡ ಹೆಚ್ಚಾಗುವುದರಿಂದ ಮೇಲಕ್ಕೆ ಬರುತ್ತದೆ. ಹಾಗಾಗಿ ಸ್ವಲ್ಪ ಭಾರವಾದ ಕಲ್ಲನ್ನು ಕಟ್ಟುತ್ತಾರೆ.

ಗ್ರೆನೇಡ್ ನೀರಿಗೆ ಹಾಕಿ ಮೀನು ಹಿಡಿಯುವಾಗ ಕೆಲವೊಂದು ತಂತ್ರಗಳನ್ನು ಅಳವಡಿಸಿಕೊಳ್ಳುತ್ತಾರೆ. ಆ ತಂತ್ರಗಳೆಂದರೆ ನೀರಿನ ಆಳ ಹೆಚ್ಚಾಗಿದ್ದರೆ ಬಳಸುವ ಬತ್ತಿಯನ್ನು ಉದ್ದವಾಗಿ ತುಂಡು ಮಾಡುತ್ತಾರೆ. ಗ್ರೆನೇಡ್ ಆಳದಲ್ಲಿ ಹೋಗಿ ತಳ ಹಿಡಿದು ಸಿಡಿದರೆ ಅಡಿಯಲ್ಲಿರುವ ಮೀನಿನ ಕಿವಿರು ಒಡೆದು ಸಾಯುತ್ತವೆ ಅನ್ನುವ ಉದ್ದೇಶದಿಂದ ಈ ತಂತ್ರವನ್ನು ಅಳವಡಿಸುತ್ತಾರೆ. ಮಾತ್ರವಲ್ಲ ಆಳ ನೀರಿಗೆ ತೆಂಗಿನ ಕಾಯಿ ಹಿಂಡಿ, ಅನ್ನ, ಹುತ್ತದ ಗೂಡು ಇತ್ಯಾದಿಗಳನ್ನು 2 ಗಂಟೆ ಮೊದಲು

ಹಾಕುತ್ತಾರೆ. ಮೀನುಗಳು ಆಹಾರವನ್ನು ತಿನ್ನಲು ಬರುತ್ತವೆ. ಕೆಲವು ಮೀನುಗಳು ಅಲ್ಲೇ ತಿಂದು ಸುತ್ತಾಡುತ್ತಿರುತ್ತವೆ. ಆಗ ತೋಟೆ/ಗ್ರೆನೇಡ್ ಸಿಡಿಸಿದಾಗ ಮೀನುಗಳು ಸಿಗುತ್ತವೆ. ಕೆಲವು ಕಡೆಗಳಲ್ಲಿ ಮರಗೆಣಸಿನ ಸೊಪ್ಪನ್ನು ಕಟ್ಟಿ ಹಗ್ಗದ ಮೂಲಕ ನೀರಿಗೆ ಎಸೆಯುತ್ತಾರೆ. ಒಂದು ದಿನ ಬಿಟ್ಟು ಆ ಜಾಗಕ್ಕೆ ತೋಟೆ ಹಾಕುತ್ತಾರೆ. ಮರಗೆಣಸಿನ ಸೊಪ್ಪನ್ನು ತಿನ್ನಲು ಕೀಜನ್, ಕಾಜೋವು(ಕೈಪೆತರು) ಇತ್ಯಾದಿ ಮೀನುಗಳು ಬರುತ್ತವೆ. ಆಗ ಈ ಜಾತಿ ಮೀನುಗಳು ತೋಟೆಯ ಸಿಡಿತದ ರಭಸಕ್ಕೆ ಸಾಯುತ್ತವೆ. ಕೆಲವರು ಅಕ್ಕಿಯನ್ನು ಹುರಿದು ಪುಡಿ ಮಾಡಿ ನೀರಿಗೆ ಹಾಕುತ್ತಾರೆ ಮತ್ತು ಮರದಲ್ಲಿರುವ ಕಪ್ಪು ಇರುವೆಯ ಗೂಡನ್ನು ಒಡೆದು ನೀರಿಗೆ ಹಾಕುತ್ತಾರೆ. ಆಗ ಹತ್ತು ನಿಮಿಷ ಕಳೆದು ಆ ಸ್ಥಳಕ್ಕೆ ತೋಟೆ ಹಾಕಿ ಮೀನು ಹಿಡಿಯುತ್ತಾರೆ.

### 5.1.1 ಮಡೆಂಜಿ/ಗೆಂಡೆ ಮೀನಿನ ಬೇಟೆ:

ಗ್ರಾನೈಡ್ ಸಿಡಿಸಿ ಮಡೆಂಜಿ ಮೀನು ಹಿಡಿಯುವುದು ಅತ್ಯಂತ ಸೂಕ್ಷ್ಮ ಮತ್ತು ಅಪಾಯಕಾರಿಯಾದ ಕೆಲಸ. ಸಾಮಾನ್ಯವಾಗಿ ನೀರಿಗೆ ಬಾಗಿರುವ ಮರಕ್ಕೆ ಹತ್ತಿ ಯಾವ ಸ್ಥಳದಲ್ಲಿ ಮಡೆಂಜಿ ಮೀನುಗಳು ವಾಸಿಸುತ್ತವೆ ಮತ್ತು ಬೇಸಿಗೆ ಕಾಲದಲ್ಲಿ ಈ ಜಾತಿಯ ಮೀನುಗಳು ಮೊಟ್ಟೆ ಇಟ್ಟು ಮರಿಮಾಡುತ್ತವೆ ಎಂದು ಮೀನು ಬೇಟೆಗಾರ ಸೂಕ್ಷ್ಮವಾಗಿ ಮರದಲ್ಲಿ ಕುಳಿತು ಹೊಂಚು ಹಾಕುತ್ತಿರುತ್ತಾರೆ. ಕಡಿಮೆ ಅಂದರೆ 2 ರಿಂದ 3ಗಂಟೆಯವರೆಗೆ ಹೊಂಚು ಹಾಕಿ ಮರದಲ್ಲಿ ಕುಳಿತಿರುತ್ತಾರೆ. ಮರಿ ಇದ್ದಂತಹ ಸಂದರ್ಭದಲ್ಲಿ ಆಹಾರ ಹುಡುಕಿಕೊಂಡು ಹೊರಗೆ ಹೋದ ಸ್ವಲ್ಪ ಹೊತ್ತು ಕಳೆದು ಮರಿಗಳ ಹತ್ತಿರ ಬರುತ್ತದೆ. ಈ ಜಾತಿಯ ಮೀನುಗಳು ಗಂಡು-ಹೆಣ್ಣು ಜೊತೆಯಾಗಿ ವಾಸಿಸುತ್ತವೆ. ಮನುಷ್ಯನ ನೆರಳು ನೀರಿನ ಮೇಲೆ ಬಿದ್ದಾಗ ತಕ್ಷಣ ನದಿದಡದಿಂದ ವೇಗವಾಗಿ ನೀರಿನ ಆಳದ ಕಡೆಗೆ ಧಾವಿಸುತ್ತವೆ. ಅದಕ್ಕಾಗಿ ಗಂಟೆಗಟ್ಟಲೆ ಕಾಯುತ್ತಿರುತ್ತಾರೆ. ಮಡೆಂಜಿ ಮೀನಿಗೆ ತೋಟೆ ಹಾಕುವ ಸಂದರ್ಭದಲ್ಲಿ ಕೇಪುಗೆ ಸರಿಯಾಗಿ ಅಂದರೆ ಒಂದು ಇಂಚಿನಷ್ಟು ಕೇಪು ಉದ್ದವಿರುತ್ತದೆ. ಅದಕ್ಕೆ ಸಮನಾಂತರವಾಗಿ ಬತ್ತಿಯನ್ನು ತುಂಡು ಮಾಡುತ್ತಾರೆ. ಅಂದರೆ ನೀರಿಗೆ ತೋಟೆ ಬಿದ್ದ ತಕ್ಷಣ ಸಿಡಿಬೇಕು ಅನ್ನುವ ದೃಷ್ಟಿಯಿಂದ ಈ ರೀತಿ ಮಾಡುತ್ತಾರೆ. ಇಲ್ಲವಾದರೆ ಮಡೆಂಜಿ ಮೀನುಗಳು ಸಾಯುವುದಿಲ್ಲ. ಮಡೆಂಜಿ ಮೀನಿಗೆ ತೋಟೆ ಹಾಕುವ ಸಂದರ್ಭದಲ್ಲಿ ಎಚ್ಚರಿಕೆಯಿಂದ ಇರಬೇಕಾದ ಸಂಗತಿ ಏನೆಂದರೆ ಬತ್ತಿ ಗಿಡ್ಡವಾಗಿರುವುದರಿಂದ ಕೈಯಲ್ಲಿ ಸಿಡಿದು ಕೈ, ದೃಷ್ಟಿ ಕಳೆದುಕೊಳ್ಳುವ ಸಂಭವವಿರುತ್ತದೆ. ಮಾತ್ರವಲ್ಲ ಬಿಸಿಲಿರುವುದರಿಂದ ಬತ್ತಿಗೆ ಬೆಂಕಿ ಹತ್ತಿಕೊಂಡದ್ದು ತಿಳಿಯದಿರುವ ಸಂಗತಿಗಳಿವೆ. ಹಾಗಾಗಿ ಕೈಯ್ಯಲ್ಲಿ ಸಿಡಿಯುತ್ತದೆ ಮತ್ತು ನೀರಿಗೆ ಬೀಳುವ ಮೊದಲೇ ಸಿಡಿಯುವ ಸಾಧ್ಯತೆಗಳಿವೆ. ಹಾಗಾಗಿ ಈ ವಿಧಾನ ಅತ್ಯಂತ ಅಪಾಯಕಾರಿ ಮತ್ತು ಪ್ರಾಣಕ್ಕೆ ಹಾನಿಕಾರಕವಾದುದು. ಮಡೆಂಜಿ ಮೀನಿಗೆ ಹಾಕುವ ಗ್ರಾನೈಡ್ ಸ್ಫೋಟದಿಂದಾಗಿ ಚಿಕ್ಕ ಮರಿಗಳು ನಿರ್ವಂಶವಾಗುವ ಸಾಧ್ಯತೆಗಳಿರುತ್ತವೆ. ಮಡೆಂಜಿ ಮೀನಿನ ಮರಿಗಳನ್ನು ತಿನ್ನಲು ಕೊಂತಿ ಮೀನುಗಳು ಅದರ ಸಮೀಪವೇ

ಸುಳಿದಾಡುತ್ತಿರುತ್ತವೆ ಮತ್ತು ಕೈಪೆತರು/ಕಾಜೋವು ಮೀನುಗಳು ಮಡೆಂಜಿ ಮೀನಿನ ಪಕ್ಕದಲ್ಲೇ ಓಡಾಡುತ್ತಿರುತ್ತವೆ. ಗ್ರೆನೇಡ್ ಸ್ಪೋಟದಿಂದಾಗಿ ಇವುಗಳು ಕೂಡ ಸಾಯುತ್ತವೆ. ಗ್ರೆನೇಡನ್ನು ಸಾಧಾರಣ ಆಳದಿಂದ ಸಿಡಿದು ಹೆಚ್ಚು ಆಳ ಅಂದರೆ ಮುಳುಗಿ ಮೀನು ಹೆಕ್ಕುವಷ್ಟು ಆಳವಿರುವ ಕಯಗಳಿಗೆ ಹಾಕುತ್ತಾರೆ. ಕೆಲವು ಸ್ಥಳಗಳಲ್ಲಿ ನೀರಿನ ಆಳದಲ್ಲಿ ಕೆಸರು ತುಂಬಿಕೊಂಡಿದ್ದರೆ ಗ್ರೆನೇಡ್ ಸ್ಪೋಟದ ಬಳಕೆ ಆದ ಸುಮಾರು ಅರ್ಧ ಗಂಟೆಯಾದರೂ ಕಾಯಬೇಕಾಗುತ್ತದೆ. ಇಲ್ಲವಾದರೆ ನೀರಿನ ಆಳದಲ್ಲಿ ಮಣ್ಣು ಮಿಶ್ರಿತ(ಕಳಂಕ್ ನೀರು) ಇರುವುದರಿಂದ ಸತ್ತ ಮೀನುಗಳು ಗೋಚರವಾಗುವುದಿಲ್ಲ. ಹಾಗಾಗಿ ಅಷ್ಟು ಸಮಯ ಕಾಯಬೇಕಾಗುತ್ತದೆ.

## 5.2 ಗರ್ನಾಲು ಹಾಕುವುದು

ಗರ್ನಾಲು ಹಾಕಿ ಮೀನು ಹಿಡಿಯುವುದು ಸಹ ಕಾನೂನಿನ ಅಡಿಯಲ್ಲಿ ತಪ್ಪು ಅನಿಸಿಕೊಳ್ಳುತ್ತದೆ. ಪಟಾಕಿಗೆ ಹಾಕುವ ಸ್ಪೋಟಕ ಮದ್ದನ್ನು/ವಸ್ತುವನ್ನು ಬಳಸುತ್ತಾರೆ. ನೀರಿಗೆ ಹಾಕುವ ಗರ್ನಾಲ್‌ಗೆ ಗ್ರೆನೇಡ್‌ಗೆ ಬಳಸುವ ಬತ್ತಿಯನ್ನೇ ಇದರಲ್ಲಿ ಬಳಸುತ್ತಾರೆ. ಆದರೆ ಹೆಚ್ಚು ಆಳವಿರುವ ನೀರಿಗೆ ಹಾಕದೆ ಗೆದ್ದಲು, ಅನ್ನ, ಹುರಿದ ಅಕ್ಕಿ, ಸೆಗಣಿಗೆ ರಾಗಿಯನ್ನು ಮಿಶ್ರಮಾಡಿ ನಿಂತಂತಹ ನೀರಿಗೆ ಹಾಕುತ್ತಾರೆ. ಆ ಸ್ಥಳಕ್ಕೆ 10 ನಿಮಿಷದ ನಂತರ ಮೀನಿನ ಗರ್ನಾಲು ಹಾಕುತ್ತಾರೆ. ಗ್ರೆನೇಡ್ ಹಾಗೆಯೇ ಹೆಚ್ಚು ವಿಸ್ತಾರವಾದ ಸ್ಥಳದಲ್ಲಿರುವ ಮೀನುಗಳು ಸಾಯುವುದಿಲ್ಲ. 2 ಮೀಟರ್‌ನಷ್ಟು ಅಗಲಕ್ಕೆ/ಸುತ್ತಳತೆಯಿರುವ ಚಿಕ್ಕ/ತರು ಮೀನುಗಳು ಸಾಯುತ್ತವೆ.

ಸ್ವಲ್ಪ ಹೊತ್ತಿನ ನಂತರ ಕೆಲವು ಮೀನುಗಳು ಯಥಾವತ್ತಾಗಿ ಓಡಾಡಲು ಆರಂಭಿಸುತ್ತವೆ. ಗ್ರೆನೇಡ್ ಹಾಕಲು ಬಳಸುವ ವಸ್ತುಗಳ ಹಾಗೆ ಸಾಧಾರಣ ಗಾತ್ರದ ಕಲ್ಲು ಮತ್ತು ಕಾಡಿನ ಬಳ್ಳಿಯನ್ನು ಬಳಸುತ್ತಾರೆ.

ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಗ್ರಾನೈಡ್ ನೀರಿಗೆ ಹಾಕುವ ಸಂದರ್ಭದಲ್ಲಿ ಕಡಿಮೆ ಅಂದರೆ 200 ಮೀಟರ್‌ನಷ್ಟು ದೂರದಲ್ಲಿ ಯಾರು ನೀರಿಗೆ ಇಳಿಯಬಾರದು ಮತ್ತು ಸಿಡಿಯುವಾಗ ನೀರಿನಲ್ಲಿ ಮುಳುಗಬಾರದು ಅದೇ ರೀತಿ ಮೀನಿನ ಗರ್ನಾಲ್ ಸಿಡಿಯುವಾಗ ಹತ್ತಿರದಲ್ಲಿ ನೀರಿಗಿಳಿಯಬಾರದು. ಸಾಧಾರಣ 50 ಮೀಟರ್ ನಷ್ಟು ದೂರದಲ್ಲಿ ನೀರಿಗೆ ಇಳಿಯಬಾರದು ಹಾಗಾಗಿ ಈ ರೀತಿಯ ಎಚ್ಚರಿಕೆ ಅತೀ ಅವಶ್ಯಕ. ಈ ಎರಡೂ ರೀತಿಯ ಸ್ಪೋಟಕಗಳನ್ನು ಮಕ್ಕಳಿಂದ, ಸಾಕು ಪ್ರಾಣಿಯಿಂದ ದೂರವಿರಬೇಕು. ಯಾಕೆಂದರೆ ಗ್ರೆನೇಡ್‌ನಲ್ಲಿ ಬಳಸುವ 'ಕೇಪು' ಅದು ಸಾಧಾರಣ ಪೆನ್ನಿನ ಟಾಪ್‌ನ/ತಾಯಿತದ ಗಾತ್ರದಲ್ಲಿರುತ್ತದೆ. ಅದನ್ನು ಚಿಕ್ಕ ಮಕ್ಕಳು ಕಚ್ಚಿದರೆ, ನಾಯಿ ಬೆಕ್ಕು ಕಚ್ಚಿದರೆ ಸ್ಪೋಟಗೊಳ್ಳುವ ಸಂಭವ ಇರುತ್ತದೆ. ಆದುದರಿಂದ ಇದರ ಬಗ್ಗೆ ತುಂಬಾ ಜಾಗರೂಕವಾಗಿಡಬೇಕು.

## 5.3 ಇತರೆ ಬೇಟೆ:

### 5.3.1 ಆಮೆ ಬೇಟೆ:

ತುಳು ಭಾಷೆಯಲ್ಲಿ 'ಏಮೆ' ಅಂದರೆ ಆಮೆ ಮೂರು ರೀತಿಯ ಆಮೆಯನ್ನು ತುಳುನಾಡಿನಲ್ಲಿ ಕಾಣಬಹುದು. ಬಿಳಿ ಆಮೆ, ಕಪ್ಪು ಆಮೆ ಮತ್ತು ಪಾಲೆವು. ಬಿಳಿ ಆಮೆ ಹೆಚ್ಚಾಗಿ ನೀರಿನಲ್ಲಿಯೇ ಇದ್ದುಕೊಂಡು ಮೀನುಗಳನ್ನು ತಿಂದು ಬದುಕುತ್ತವೆ. ಬಿಳಿ ಜಾತಿಯ ಆಮೆಗಳು ಗಾಳಕ್ಕೆ ಸಿಗುತ್ತವೆ. ಗಾಳಕ್ಕೆ ಮೀನು, ಎರೆಹುಳ ಇವುಗಳನ್ನು ಪೋಣಿಸಿದಾಗ ಆಹಾರ ಅರಸಿಕೊಂಡು ಬಂದಂತಹ ಆಮೆಗಳು ಗಾಳದಲ್ಲಿರುವ ಆಹಾರವನ್ನು ನುಂಗಿ ಬೇಟೆಗಾರರಿಗೆ ಸಿಗುತ್ತವೆ. ಕಪ್ಪು ಆಮೆಗಳು ನೀರಿಗಿಂತ ಹೆಚ್ಚಾಗಿ ದಡದಲ್ಲಿ ತಂಪಾದ ಜಾಗವನ್ನು ಆಶ್ರಯಿಸಿಕೊಂಡಿರುತ್ತದೆ. ಇವುಗಳು ಅಲ್ಲಿ ಇಲ್ಲಿ ಸಿಗುವ ಆಹಾರ, ಅಣಬೆ, ಮಿಡತೆ ಹುಲ್ಲು ಇದನ್ನು ತಿನ್ನಲು ರಾತ್ರಿ ಹೊತ್ತು ಸಂಚಾರ ಮಾಡುತ್ತಿರುತ್ತದೆ. ಮೀನು ಬೇಟೆಗಾರರು ಅದರ ಹೆಜ್ಜೆಯ ಜಾಡನ್ನು ಹಿಡಿದುಕೊಂಡು ಆಮೆ ಹುಡುಕಲು ಪ್ರಯತ್ನಿಸುತ್ತಾರೆ. ಮರಳಿನ ಮೇಲೆ ಅಥವಾ ಕೆಸರಿನ ಮೇಲೆ ಸಂಚಾರ ಮಾಡಿದಾಗ ಅದರ ಹೊಟ್ಟೆಯ ತಳಭಾಗ, ಕೈ ಮತ್ತು ಕಾಲಿನ ಹೆಜ್ಜೆ ಗುರುತಿಸುತ್ತಾರೆ. ಹಸಿ ಎಲೆಯ ಮೇಲೆ ಸಂಚರಿಸಿದಾಗ ಅದರ/ಆಮೆಯ ಕೈ, ಕಾಲಿನ ಉಗುರುಗಳು ಎಲೆಗೆ ತಾಗಿ ತೂತುಗಳಾಗಿರುತ್ತದೆ. ಈ ಸೂಕ್ಷ್ಮಗಳನ್ನು ಅವಲೋಕಿಸಿಕೊಂಡು ಆಮೆಯನ್ನು ಬೇಟೆಯಾಡುತ್ತಾರೆ. ನದಿಯ ದಡ, ಗದ್ದೆ ಬದುಗಳಲ್ಲಿ ಆಮೆಯು ಬಿಲದೊಳಗೆ ಅವಿತುಕೊಂಡಿರುತ್ತದೆ. ಅಂತಹ ಸಂದರ್ಭದಲ್ಲಿ ಆ ಬಿಲವನ್ನು ಅಗೆದು ಆಮೆಗಳನ್ನು ಹಿಡಿಯುತ್ತಾರೆ. ಅಥವಾ ಅಗೆಯಲು ಅಸಾಧ್ಯವಾದ ಬಿಲಗಳಾದರೆ ಬಿಲದ ಎದುರುಗಡೆ ಗುಂಡಿ ತೋಡಿ, ಸಾಧಾರಣ ಗಾತ್ರದ ಡಬ್ಬಿಯನ್ನು ಬಾಯಿ ತೆರೆದಿಟ್ಟು ಹೂಳುತ್ತಾರೆ. ಬಿಲದಿಂದ ಹೊರಟು ಬರುವಾಗ ಡಬ್ಬಿಯೊಳಗೆ ಬೀಳುತ್ತದೆ. ಬಿದ್ದಾಗ ಅದರ ಉಗುರು ಡಬ್ಬಿಗೆ ಹತ್ತಿಕೊಳ್ಳದ ಕಾರಣ ಅದರಿಂದ ಹೊರಬರಲಾಗುವುದಿಲ್ಲ.

**ಸಾಂಬಾರು ಮಾಡುವ ವಿಧಾನ:**

ತುಳು ಭಾಷೆಯಲ್ಲಿ ಒಂದು ಪ್ರಸಿದ್ಧ ಗಾದೆ ಇದೆ. ಏಮೆ ಮಲಂಕಣೆ ಆಂಡ ಪೋಂಡು ತಡ್ಪೆ ಕಂಕಣೆ ಆಂಡ ಪೋಂಡು(ಆಮೆ ಮೇಲ್ಮುಖ ಆದ್ರೆ ಹೋಯಿತು, ಗೆರಸೆ ಕವುಚಿ ಹಾಕಿದರೆ ಹೋಯಿತು) ಆಮೆ ಸಿಕ್ಕಿದಾಗ ಅದನ್ನು ಕವುಚಿ ಹಾಕಬೇಕು. ಅದರೂ ಕೆಲವೊಂದು ಬಾರಿ ಅದು ಮತ್ತೆ ಸರಿಯಾಗಿ ಬೀಳುವ ಸಾಧ್ಯತೆ ಇರುತ್ತದೆ. ಆಮೆಗೆ ಕಾಡಿನಲ್ಲಿ ಸಿಗುವ ಕುಯ್ಯಲ ಬೂರು(ಬಿಳಲು) ಅಥವಾ 'ಅರ್ಕೆದ ಬಿಳಲುಗಳಿಂದ ಅದರ ಕೈ ಕಾಲು, ತಲೆ ಹೊರಗೆ ಬರದ ಹಾಗೆ ಸುತ್ತ ಬಳ್ಳಿಯಿಂದ ಸುತ್ತುತ್ತಾರೆ. ಮತ್ತು ಚೀಲದಲ್ಲಿ ಹಾಕಿ ಗಟ್ಟಿಯಾಗಿ ಕಟ್ಟಬೇಕು. ಆವಾಗ ಅದಕ್ಕೆ ಹೊರಬರಲಾಗುವುದಿಲ್ಲ. ಕಪ್ಪು ಆಮೆಗಳನ್ನು ಹೆಚ್ಚಾಗಿ ಬೆಂಕಿಗೆ/ಕೆಂಡಕ್ಕೆ ಹಾಕುತ್ತಾರೆ. ಬಿಳಿ ಆಮೆಯನ್ನು ಕುದಿಯುತ್ತಿರುವ ಬಿಸಿನೀರಿಗೆ ಹಾಕುತ್ತಾರೆ. ಈ ರೀತಿ ಸಾಯಿಸಿದ ನಂತರ ಅದನ್ನು ಕಾಲು ಮತ್ತು ಕೈಭಾಗದಿಂದ ಸೀಳುತ್ತಾರೆ. ಕಪ್ಪು(ಕಾರೆ) ಆಮೆಯಲ್ಲಿ ಅದರ ಬೆನ್ನಿನ ಭಾಗದ ಚಿಪ್ಪು ಗಟ್ಟಿಯಾಗಿರುವುದರಿಂದ ಮಾಂಸದ ಪ್ರಮಾಣ ಕಡಿಮೆ ಇರುತ್ತದೆ. ಆದರೆ

ಬಿಳಿ(ಬೊಲ್ಲೆ) ಆಮೆಯಲ್ಲಿ ನಡುಬೆನ್ನಿನ ಭಾಗ ಮಾತ್ರ ಗಟ್ಟಿಯಾಗಿರುತ್ತದೆ. ಅಂತೆಯೇ ತಳಭಾಗವೂ ಮಧ್ಯಭಾಗ ಮಾತ್ರ ಗಟ್ಟಿಯಾಗಿರುತ್ತದೆ. ಉಳಿದ ಭಾಗವನ್ನು ಮಾಂಸವಾಗಿ ಬಳಸುತ್ತಾರೆ. ತಲೆಭಾಗವನ್ನು ಕತ್ತರಿಸಿ ತೆಗೆಯುತ್ತಾರೆ. ಇತರೇ ಮಾಂಸವನ್ನು ಸಾಂಬಾರು ಮಾಡಿದ ಹಾಗೆ ಮಾಡುತ್ತಾರೆ.

**5.3.2 ಪಾಲೇವು ಬೇಟೆ**

ಪಾಲೇವು ಎಂದರೆ ಆಮೆ ಜಾತಿಗೆ ಸೇರಿದ ಜಲಚರ. ಕಡು ಹಸಿರು ಬಣ್ಣವನ್ನು ಹೊಂದಿರುತ್ತದೆ. ಇಪುಳು/ತಿಪುಳು ಹಾಕುವ ವಿಧಾನದಲ್ಲಿ ಇದನ್ನು ಉಲ್ಲೇಖಿಸಲಾಗಿದೆ. ಆದರೆ ಪಾಲೇವು ಬೇಟೆಯ ಬಗ್ಗೆ ಸಂಪೂರ್ಣ ವಿವರಗಳನ್ನು ಅಲ್ಲಿ ನೀಡಲಿಲ್ಲ. ಪಾಲೇವು ಗಾತ್ರದಲ್ಲಿ ತುಂಬಾ ದೊಡ್ಡದಾಗಿರುತ್ತದೆ. ಇತರ ಆಮೆಯ ಹಾಗೆ ಅದು ದಡಕ್ಕೆ ಬರುವುದಿಲ್ಲ. ನೀರಿನ ಮಧ್ಯದಲ್ಲಿರುವ ಎತ್ತರ ಕಲ್ಲಿನಲ್ಲಿ ಬಂದು ಬಿಸಿಲಿಗೆ ಮೈಯೊಡ್ಡುತ್ತವೆ. ಮನುಷ್ಯ ಸಂಚಾರ ತಿಳಿದರೆ ತಕ್ಷಣ ನೀರಿಗೆ ಹಾರಿ ಮರೆಯಾಗುತ್ತವೆ.

**ಬೇಟೆ ವಿಧಾನ:**

**ಒಂದನೇ ವಿಧಾನ:** ಸಾಧಾರಣ ಗಾತ್ರದ ಗಾಳಕ್ಕೆ ಕೋಳಿಯ ಕರುಳನ್ನು ಪೋಣಿಸಿ ನೀರಿಗೆ ಹಾಕುತ್ತಾರೆ. ಕೆಲವು ಗಂಟೆಗಳ ಬಳಿಕ ಅವುಗಳು ಗಾಳಕ್ಕೆ ಸಿಕ್ಕಿಹಾಕಿಕೊಳ್ಳುವ ಪ್ರಮೇಯ ಇರುತ್ತದೆ.

**ಎರಡನೆ ವಿಧಾನ:** ಕಾಡಿನಲ್ಲಿ ದೊರೆಯುವ ಬಳ್ಳಿಯಲ್ಲಿ ಆಗುವಂತಹ ದ್ರಾಕ್ಷಿ ಗಾತ್ರದ ಕಳೆಂಜಿಕಾಯಿ ಮತ್ತು ಮನುಷ್ಯನ ಹೃದಯವನ್ನು ಹೋಲುವ ಅಥವಾ ಕೋಳಿಯ ಹೊಟ್ಟೆಯಲ್ಲಿರುವ ಕಂದ್ ಕಾಯಿ/ಗುಂಡ್ಲು ಕಾಯಿಯನ್ನು ಹೋಲುವ ಬಟ್ಪಾಯಿ ಕಾಯಿಯನ್ನು ಗುದ್ದಿ ಅದರೊಳಗಿನ ಬಿಳಿ ತಿರುಳನ್ನು ತೆಗೆದು  ಚಿಕ್ಕ ಗಾತ್ರದ ಏಡಿಯ ಹೊಟ್ಟೆಯಲ್ಲಿರುವ  ಎಲ್ಲವನ್ನು ತೆಗೆದು ಅದರೊಳಗೆ ಕಳೆಂಜಿ ಕಾಯಿ ಮತ್ತು ಬಟ್ಪಾಯಿ ಕಾಯಿಯ ತಿರುಳನ್ನು ಮಿಶ್ರ ಮಾಡಿ ತುಂಬಿಸಿ ಸಣ್ಣ ನೂಲಿನಿಂದ ಕಟ್ಟುತ್ತಾರೆ. ಅದನ್ನು ನೀರಿಗೆ ಎಸೆಯುತ್ತಾರೆ. ಅದನ್ನು ತಿಂದಂತಹ ಪಾಲೆವುಗಳು ದಡಕ್ಕೆ ಬಂದು ಸಾಯುತ್ತವೆ.

**5.3.3 ಏಡಿ ಬೇಟೆ:**

ತುಳು ಭಾಷೆಯಲ್ಲಿ ಏಡಿಗೆ ಡೆಂಜಿ, ಜೆಂಜಿ ಎಂದು ಹೆಸರುಗಳಿವೆ. ಮಳೆಗಾಲ ಕಳೆದು ಸಪ್ಟೆಂಬರ್, ಅಕ್ಟೋಬರ್ ತಿಂಗಳಿನಲ್ಲಿ ದೊಡ್ಡ ತೋಡುಗಳಲ್ಲಿ\ಸಣ್ಣ ಕಣಿವೆಗಳಲ್ಲಿ ಕಲ್ಲಿನ ಅಡಿಯಲ್ಲಿ, ತರಗೆಲೆಗಳ ಮಧ್ಯದಲ್ಲಿರುವ ಏಡಿಯನ್ನು ಮಂಕರಿ (ಮಕ್ಕರಿ)ಯನ್ನು ಬಳಸಿಕೊಂಡು ಹಿಡಿಯುತ್ತಾರೆ. ನೀರು ಕಡಿಮೆಯಾದಾಗ ಅವು ನದಿ ನೀರಿಗೆ ಇಳಿಯಲು ಆರಂಭ ಮಾಡುತ್ತದೆ. ಆವಾಗ ಅದು ಕಲ್ಲು, ತರಗೆಲೆಗಳಲ್ಲಿ ಸೇರಿಕೊಂಡಿರುತ್ತವೆ.

ಏಡಿ ಬೇಟೆಯ ವಿಧಾನಗಳು

**5.3.3.1 ಒಕೊಲು/ತೋಕೊಲು (ಕೊರ್ಪುಣೆ) ಕೊಡುವುದು**

ಸಪ್ಟೆಂಬರ್/ಅಕ್ಟೋಬರ್ ತಿಂಗಳಿನಲ್ಲಿ ಹೆಚ್ಚು ಬಿಸಿಲು ಇದ್ದಾಗ ಒಕೊಲು ಕೊಡುವ ವಿಧಾನವನ್ನು ಅನುಸರಿಸುತ್ತಾರೆ. ಸಾಧಾರಣ ಒಂದೂವರೆ ಮೀಟರ್ ಉದ್ದದ ಹಸಿ ಬಿದಿರಿನ ಕೋಲಿಗೆ ಕಪ್ಪೆ, ಸಮುದ್ರ ಮೀನು, ಭೂತಾಯಿ, ಬಂಗುಡೆ ಇನ್ನಿತರ ಯಾವುದೇ ಮೀನನ್ನು ಕೋಲಿಗೆ ಕಟ್ಟುತ್ತಾರೆ. ಕಟ್ಟುವ ಸಂದರ್ಭದಲ್ಲಿ ಬಿದಿರಿನ ಕೋಲನ್ನು ಸ್ವಲ್ಪ ಸಿಪ್ಪೆ ತೆಗೆದು ಹಾಗೆ ಅದರ ಮಧ್ಯದಲ್ಲಿ ಮೀನನ್ನು/ಕಪ್ಪೆಯನ್ನು ಗಟ್ಟಿಯಾಗಿ ಕಾಡಿನ ಬಳ್ಳಿಯಿಂದ ಕಟ್ಟುತ್ತಾರೆ. ಮೀನು ಕಟ್ಟಿದ ಕೋಲಿನ ತುದಿಯನ್ನು ಏಡಿ ಬಿಲದ ಹತ್ತಿರ ನಿಧಾನವಾಗಿ ಮೀನನ್ನು ತೋರಿಸುತ್ತಾ ಹೋಗುತ್ತಾರೆ. ಬಿಲದ ಎದುರಿನಲ್ಲಿಯೇ ಆಹಾರಕ್ಕಾಗಿ ಕಾಯುತ್ತಿರುವ ಏಡಿಗಳು ಮೀನಿನ ವಾಸನೆಗೆ, ಕಪ್ಪೆಯ ಹೊಟ್ಟೆಯ ಭಾಗ ಬಿಳಿ ಕಾಣುವುದರಿಂದ ತಿನ್ನಲು ಹೊರಗೆ ಬರುತ್ತವೆ. ಅಂತಹ ಸಂದರ್ಭದಲ್ಲಿ ಮೀನಿರುವ ಕೋಲನ್ನು ಸ್ವಲ್ಪ ಸ್ವಲ್ಪವೇ ಹಿಂದಕ್ಕೆ ಎಳೆಯುತ್ತಾ ಬರುತ್ತಾರೆ. ಆದಷ್ಟು ಏಡಿಯು ಮೀನಿಗೆ ಕಚ್ಚದ ಹಾಗೆ ಎಚ್ಚರವಹಿಸುತ್ತಾರೆ. ಕಚ್ಚಿದರೆ ಅದರ ಕೊಂಬಿನ ಕಡಿತದ ತೀವ್ರತೆಗೆ ಕಟ್ಟಿದಂತಹ ಹಗ್ಗವು ತುಂಡಾಗಿ ಆಹಾರ ಏಡಿಯ ಪಾಲಾಗುವ ಸಾಧ್ಯತೆ ಇರುತ್ತದೆ. ಆದುದರಿಂದ ಏಡಿಯು ಬಿಲದಿಂದ ಹೊರಗೆ ಬರುತ್ತಿದ್ದ ಹಾಗೆ ಕೋಲನ್ನು ಹಿಂದೆ ಹಿಂದೆ ಎಳೆಯುತ್ತಾ ಬರಬೇಕು. ಏಡಿಯು ಮೀನಿನ ಆಸೆಯಿಂದ ಬಿಲವನ್ನು ಬಿಟ್ಟು ಸ್ವಲ್ಪ ದೂರ ಬಂದ ಬಳಿಕ ತಕ್ಷಣ ಕೈಯಿಂದ ಅಥವಾ ಕತ್ತಿಯನ್ನು ಬಳಸಿಕೊಂಡು ಏಡಿ ಹಿಡಿಯಬೇಕು. ಈ ರೀತಿಯಿಂದಲೂ ಕೋಲಿಗೆ ಮೀನು ಕಟ್ಟಿ ಏಡಿ ಹಿಡಿಯಬಹುದು. ತೋಕೋಲು, ಒಕೋಲು ಅನ್ನುವ ಶಬ್ಧ ಚಾಲ್ತಿಯಲ್ಲಿದೆ.

**5.3.3.2 ಕೂರಿ ಇಡುವುದು**

ಏಡಿಬೇಟೆಯ ಇನ್ನೊಂದು ವಿಧಾನವೆಂದರೆ ಕೂರಿ ಇಡುವುದು. ಕೂರಿಯ ಒಳಗಡೆ ಕೋಳಿಯ ಕರುಳು, ಕೊಳೆತ ಸಮುದ್ರದ ಮೀನನ್ನು ಕೂರಿಯೊಳಗೆ ಇಟ್ಟು ನೀರಿನಲ್ಲಿ ಇಟ್ಟಿರುತ್ತಾರೆ. ಈ ವಿಧಾನವನ್ನು ರಾತ್ರಿ ಹೊತ್ತು ಅಥವಾ ಹಗಲು ಹೊತ್ತಿನಲ್ಲೂ ಅನುಸರಿಸಬಹುದು. ಒಮ್ಮೆ ಏಡಿ ಕೂರಿಯ ಒಳಗೆ ಹೋದ ನಂತರ ಯಾವುದೇ ಕಾರಣಕ್ಕೂ ಹೊರಬರಲಾಗುವುದಿಲ್ಲ. ಆ ರೀತಿಯಲ್ಲಿ ಕೂರಿಯು ಬಾಯಿಯ ರಚನೆಯನ್ನು ಮಾಡಿರುತ್ತಾರೆ. ಏಡಿ ಹೊರ ತೆಗೆಯುವಾಗ ಹಗ್ಗದಿಂದ ಕಟ್ಟಿದಂತಹ ಅದರ ಮುಖಭಾಗವನ್ನು ಎದುರು ಭಾಗದಿಂದ ತೆಗೆದು ಏಡಿಯನ್ನು ಹೊರತೆಗೆದ ನಂತರ ಪುನಃ ಅದೇ ರೀತಿ ಕಟ್ಟಿ ಆಹಾರ ಪದಾರ್ಥವನ್ನು ಹಾಕಿ ಯಥಾ ರೀತಿಯಾಗಿ ನೀರಿನಲ್ಲಿಡುತ್ತಾರೆ.

**5.3.3.3 ಅಗೆತ:**

ಬೇಸಿಗೆ ಕಾಲದಲ್ಲಿ ನದಿಯ ದಡದಲ್ಲಿ ಕಲ್ಲಿನ ಎಡೆಯಲ್ಲಿ/ಸಂಧಿಯಲ್ಲಿ, ಮಣ್ಣಿನ ಬಿಲದಲ್ಲಿ ಸೇರಿಕೊಂಡಿರುತ್ತದೆ. ಮಣ್ಣಿನ ಬಲದಲ್ಲಿದ್ದರೆ ಎರಡು ಕಬ್ಬಿಣದ ಸರಳುಗಳನ್ನು ಬಳಸಿಕೊಂಡು

ಹಿಡಿಯುತ್ತಾರೆ. ರಾತ್ರಿ ಹೊತ್ತು ಸೆಕೆಗೆ ಬಿಲದ ಬಾಗಿಲಿನಲ್ಲಿ ಏಡಿಗಳಿರುತ್ತವೆ. ಟಾರ್ಚ್ ಹಾಕಿದಾಗ ಏಡಿಗಳಿಗೆ ಕಣ್ಣು ಮಂಜಾಗುತ್ತದೆ. ಆಗ ಅದು ಟಾರ್ಚ್ ಲೈಟ್‌ನ ಬೆಳಕನ್ನೇ ನೋಡುತ್ತಿರುತ್ತವೆ. ಇಂತಹ ಸಂದರ್ಭದಲ್ಲಿ ಏಡಿ ಇರುವ ಜಾಗಕ್ಕಿಂತ ಸ್ವಲ್ಪ ದೂರದಲ್ಲಿ ಅದರ ಬಿಲಕ್ಕೆ ಅಡ್ಡಲಾಗಿ ಚೂಪಾದ ಸರಳಿನಿಂದ ಚುಚ್ಚುತ್ತಾರೆ. ಆಗ ಅದು ಬಿಲದ ಒಳಕ್ಕೆ ಹೋಗದ ಹಾಗೆ ಅಡ್ಡವಾಗುವುದರಿಂದ ಕೈ ಹಾಕಿ ಹಿಡಿಯುತ್ತಾರೆ. ಏಡಿ ಇರುವ ಬಿಲಕ್ಕೆ ಕೈ ಹಾಕಿ ಏಡಿಯ ಅಡಿ ಅಥವಾ ಮೇಲ್ಭಾಗಕ್ಕೆ ಕೈ ತೆಗೆದುಕೊಂಡು ಹೋಗಿ ಬೆರಳಿಗೆ ಕಚ್ಚದ ಹಾಗೆ ಎಚ್ಚರಿಕೆಯಿಂದ ಹಿಡಿಯುತ್ತಾರೆ ಅಥವಾ ಅತೀ ಚೂಪಾದ ಭರ್ಜಿಯಿಂದ ಏಡಿಗೆ ಚುಚ್ಚಿ ಎಳೆಯುತ್ತಾರೆ. ಕೆಲವು ಸಾಧಾರಣ ಬಿಲಗಳಾದರೆ ಅದನ್ನು ಮರದ ಭರ್ಜಿ, ಹಾರೆ, ಪಿಕ್ಕಾಸಿನಿಂದ ಅಗೆಯುತ್ತಾರೆ. ಒಂದೇ ಬಿಲದಲ್ಲಿ ಹತ್ತಕ್ಕಿಂತ ಹೆಚ್ಚು ಏಡಿಗಳು ಸಿಗುತ್ತವೆ. ಅಂದರೆ ಒಂದು ಏಡಿ ಬಿಲದೊಳಗೆ ಹೊಕ್ಕನಂತರ ಇನ್ನೊಂದು ಏಡಿ ಹೋದರೆ ಮೊದಲು ಹೋದ ಏಡಿ ಬರಲಾರದೆ ಅಲ್ಲೇ ಸಿಲುಕುವ ಸಂಭವ ಇರುತ್ತವೆ. ಹಾಗಾಗಿ ಪ್ರಬಲರಾದವರ ಎದುರಿಗೆ ಹೇಗೆ ದುರ್ಬಲರು ಯಾತನೆ ಅನುಭವಿಸಬೇಕಾಗುತ್ತದೋ ಅದೇ ಪರಿಸ್ಥಿತಿ ಏಡಿಯ ಬಿಲದಲ್ಲಿಯೂ ನಡೆಯುತ್ತದೆ. ದೊಡ್ಡ ಏಡಿ ಕೊನೆಗೆ ಪ್ರವೇಶ ಮಾಡಿದರೆ ಅದಕ್ಕಿಂತ ಮೊದಲು ಹೋದಂತಹ ಏಡಿಗಳು ಮಳೆಗಾಲದವರೆಗೆ ಅಲ್ಲೇ ಒದ್ದಾಡುವ ಪರಿಸ್ಥಿತಿ ಇರುತ್ತದೆ.

## ಅಧ್ಯಾಯ–6

# ತುಳು ಜನಪದ ಸಾಹಿತ್ಯದಲ್ಲಿ ಮೀನಿನ ಉಲ್ಲೇಖ

ಅಧ್ಯಾಯ-6

# ತುಳು ಜನಪದ ಸಾಹಿತ್ಯದಲ್ಲಿ ಮೀನಿನ ಉಲ್ಲೇಖ

## 6.1 ಪೌರಾಣಿಕ ಹಿನ್ನಲೆ/ಕತೆ:

ಸಿಹಿನೀರಿನ ಮೀನಿಗೆ ಸಂಬಂಧಿಸಿದ ಹಾಗೆ ಪೌರಾಣಿಕ ಕತೆಯ ಹಿನ್ನೆಲೆ ಇದೆ. ದಕ್ಷಿಣ ಕನ್ನಡದಲ್ಲಿ ಪೌರಾಣಿಕ ಹಿನ್ನೆಲೆ, ಕತೆ ಇರುವುದು ಅಥವಾ ನಡೆಯುವುದು ದೇವಸ್ಥಾನ ಮತ್ತು ದೈವಸ್ಥಾನ ಅಥವಾ ದೇವರಿಗೆ ಮತ್ತು ದೈವಗಳಿಗೆ. ತುಳುನಾಡಿನಲ್ಲಿ ದೇವರಿಗೆ ಕಾವಲುಗಾರನ ಹಾಗೆ ವರ್ತಿಸುವುದು ಮತ್ತು ನಡೆದುಕೊಳ್ಳುವುದು ತುಳುನಾಡಿನಲ್ಲಿ ಜನರಿಂದ ಸೇವೆಯನ್ನು ಪಡೆದುಕೊಳ್ಳುತ್ತಿದ್ದಂತಹ/ಕೊಳ್ಳುವಂತಹ ದೈವಗಳಿಗೆ ಇದಕ್ಕೆ ಪೂರಕ ಎಂಬಂತೆ ಒಂದು ಜನಪದ ಐತಿಹ್ಯ ಕತೆಯಿದೆ. ಆ ಕತೆ ಈ ರೀತಿ ಇದೆ.

ದ.ಕ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಶಿಶಿಲ ಎಂಬ ಊರು ಇದೆ. ಇದರ ಹಿಂದಿನ ಹೆಸರು 'ದೆಸಿಲ್' ಎಂದು. ಒಂದು ದಿನ ತುಳುನಾಡಿನ ಮೂಲ ನಿವಾಸಿಗಳಲ್ಲಿ ಒಂದಾದ ಮುಗೇರ ಸಮುದಾಯದ ಮಹಿಳೆ ಮತ್ತು ಆಕೆಯ ಮಗ ಶಿಶಿಲ ಎಂಬ ಗ್ರಾಮದಲ್ಲಿ ಕಾಡಿನ ಗಡ್ಡೆಗಳಲ್ಲಿ ಒಂದಾದ 'ನರೆ'ಯನ್ನು ಅಗೆಯಲು ಚೂಪಾದ ಮರದ ಭರ್ಚಿಯನ್ನು ಹಿಡಿದು ಹೋಗುತ್ತಾರೆ. ಒಂದು ಮರದ ಬುಡದಲ್ಲಿ ಭರ್ಚಿಯ ಸಹಾಯದಿಂದ 'ನರೆ' ಅನ್ನುವ ಗಡ್ಡೆಯನ್ನು ಅಗೆಯುತ್ತಿದ್ದಾಗ ನೆಲದಿಂದ ತಕ್ಷಣ ರಕ್ತ ಚಿಮ್ಮುತ್ತದೆ. ಆವಾಗ ಆ ಹೆಂಗಸು ಹೆದರಿ ತನ್ನ ಮಗನಲ್ಲಿ ತಿಳಿಸುತ್ತಾಳೆ. ಆಗ ಆ ಜಾಗವನ್ನು ನೋಡಿದಾಗ ಅಲ್ಲಿ ಶಿವಲಿಂಗ ಇರುತ್ತದೆ. ಶಿವಲಿಂಗಕ್ಕೆ ಭರ್ಚಿ ತಾಗಿ ರಕ್ತ ಚಿಮ್ಮಿರುತ್ತದೆ. ಆ ಶಿವಲಿಂಗವನ್ನು ತಾಯಿ ಮಗನಲ್ಲಿ ಅಲ್ಲಿರುವ ಒಬ್ಬ ಬ್ರಾಹ್ಮಣ ಸಮುದಾಯದ ವ್ಯಕ್ತಿಗೆ ತಿಳಿಸಲು ಹೇಳುತ್ತಾಳೆ. ಮಗ ಬಂದು ಈ ವಿಷಯವನ್ನು ಬ್ರಾಹ್ಮಣರಲ್ಲಿ ಹೇಳಿದಾಗ ಆ ಬ್ರಾಹ್ಮಣ ನೀವು ತಳ ಸಮುದಾಯದವರು ನೀವು ಹಾಗೆಲ್ಲ ದೇವರ ಮೂರ್ತಿಯನ್ನು ಮನೆಯಲ್ಲಿಟ್ಟುಕೊಳ್ಳಬಾರದು, ಮನೆಯಲ್ಲಿಟ್ಟುಕೊಂಡರೆ ಪೂಜೆ ಮಾಡಬೇಕು. ದೇವರ ಮೂರ್ತಿಯನ್ನು ಮುಟ್ಟುವುದು ಸಹ ತಪ್ಪು ನೀವು ಆ ದೇವರ ಮೂರ್ತಿಯನ್ನು ನನಗೆ ಕೊಡಿ ನಾನು ಅದಕ್ಕೆ ದಿನಾಲು ಪೂಜೆ ಮಾಡುತ್ತೇನೆಂದು ನಂಬಿಸಿ ಆ ಶಿವಲಿಂಗವನ್ನು ಮನೆಗೆ ಕೊಂಡೊಯ್ದು ಶಿವನಿಗೆ ಪೂಜೆ ಮಾಡಲು ಆರಂಭಿಸುತ್ತಾನೆ.

ಇತ್ತಕಡೆ ಶಿವನ ತಲೆಗೆ ಆದಂತಹ ಗಾಯದ ವಿಷಯ ಬೆಳ್ತಂಗಡಿ ತಾಲೂಕಿನ ಕೊಕ್ಕಡ ಗ್ರಾಮದ 'ವೈದ್ಯನಾಥ' ಮತ್ತು 'ಬೈದ್ಯನಾಥ' ಎಂಬ ದೇವರಿಗೆ ಗೊತ್ತಾಗುತ್ತದೆ. ಆಗ ತಲೆಗಾದ ಗಾಯಕ್ಕೆ ಔಷಧಿಯನ್ನು ಹಿಡಿದುಕೊಂಡು ಈ ಇಬ್ಬರೂ ದೇವರು ಶಿಶಿಲಕ್ಕೆ ಬರುತ್ತಾರೆ. ಶಿಶಿಲಕ್ಕೆ ಬಂದು ಔಷಧಿ ಕೊಟ್ಟು ವಾಪಾಸು ಹೋಗುವಾಗ ಅಲ್ಲಿ ನದಿಯಲ್ಲಿರುವ ಪೆರುವೊಲು/ಮಹಷಿರ್ ಮೀನನ್ನು ನೋಡಿ ಖುಷಿಯಾಗುತ್ತದೆ. ಖುಷಿಯಾಗಿ ನಮಗೆ ಮೀನು ಬೇಕು ಎಂದು ಶಿವನಲ್ಲಿ ಹೇಳಿದಾಗ ಆಯ್ತು ಒಂದು

ಮೀನು ತೆಗೆದುಕೊಂಡು ಹೋಗಿ ಅಂದಾಗ ಈ ಇಬ್ಬರು ದೇವರು ಎರಡು ಮೀನನ್ನು ಹಿಡಿದುಕೊಂಡು ಹೊರಡುತ್ತಾರೆ. ಈ ವಿಷಯ ಶಿವನಿಗೆ ತಿಳಿದಿರುವುದಿಲ್ಲ. ಅರ್ಧದಾರಿಯವರೆಗೆ ಹೋಗುವಾಗ ಶಿಶಿಲದ 'ಪೊಟ್ಟ ಭೂತ' ಅನ್ನುವ ದೈವ ಶಿವನಿಗೆ ಹೇಳುತ್ತದೆ. ಈಶ್ವರ ಎಲ್ಲಿದ್ದೀಯಾ? ನಿನಗೆ ತೋರುವುದಿಲ್ಲವೇ? ಕೊಕ್ಕಡದ ವೈದ್ಯನಾಥ ಮತ್ತು ಬೈದ್ಯನಾಥ ದೇವರು ಒಂದು ಮೀನಿನ ಬದಲು ಎರಡು ಮೀನನ್ನು ತೆಗೆದುಕೊಂಡು ಹೋಗುತ್ತಿದ್ದಾರೆ ಎಂದು ಜೋರಾಗಿ ಹೇಳುತ್ತದೆ. ಆಗ ಶಿವ ನೀವು ಮೋಸದಿಂದ ತೆಗೆದುಕೊಂಡು ಹೋದ 'ಪೆರುವೊಲು' ಮೀನು 'ಮಡೆಂಜಿ' ಮೀನಾಗಲಿ ಎಂದು ಶಾಪ ಹಾಕುತ್ತಾರೆ. ಶಾಪ ಹಾಕಿದಾಗ ಇವರ ಕೈಯ್ಯಲ್ಲಿದ್ದ ಪೆರುವೊಲು ಮೀನು ಮಡೆಂಜಿ ಮೀನಾಗುತ್ತದೆ. ಆಗ ವೈದ್ಯನಾಥ ಮತ್ತು ಬೈದ್ಯನಾಥ ದೇವರು ಸಿಟ್ಟಿನಿಂದ ನಿನ್ನ ತಲೆಗೆ ಆಗಿರುವ ಗಾಯ ವಾಸಿಯಾಗದಿರಲಿ ಎಂದು ಈ ಇಬ್ಬರು ದೇವರು ಶಾಪ ಹಾಕುತ್ತಾರೆ. ಇದರಿಂದಾಗಿ ಶಿವನ ತಲೆಯ ಗಾಯ ಹಾಗೆ ಉಳಿಯುತ್ತದೆ. ಈಗಲೂ ಭರ್ಜಿ ತಾಗಿದ ಜಾಗಕ್ಕೆ ಗಂಧವನ್ನು ಅರೆದು ಗಾಯ ಆಗಿರುವ ಆ ಭಾಗಕ್ಕೆ ಹಚ್ಚುತ್ತಾರೆ ಎಂಬ ಪ್ರತೀತಿ ಇದೆ. (ಕತೆ ಹೇಳಿದವರು: ಚೋಮು 65 ವರ್ಷ, ಬೆಳಿಗ್ಗೆ 8 ಗಂಟೆ ಆಗಸ್ಟ್ ಏಳು 2018)ಹಾಗಾಗಿ ಕೊಕ್ಕಡ ವೈದ್ಯನಾಥ ಬೈದ್ಯನಾಥ ಕ್ಷೇತ್ರದ ಕೆರೆಯಲ್ಲಿ ಮಡೆಂಜಿ ಮೀನನ್ನು ಮಾತ್ರ ಕಾಣಬಹುದು. ಶಿಶಿಲ ಕ್ಷೇತ್ರದ ಕಪಿಲನದಿಯಲ್ಲಿ ಪೆರುವೋಲು ಮೀನನ್ನು ಕಾಣಬಹುದು. ಇದು ಮಡೆಂಜಿ ಮೀನು ಮತ್ತು ಪೆರುವೊಲು ಮೀನಿಗೆ ಸಂಬಂಧಿಸಿದ ಹಾಗೆ ಜನಪದ ಪುರಾಣ ಕಥೆ. ಜಾತ್ರೆ/ದೈವಗಳಿಗೆ ಹರಕೆ ಆಗುವ ಸಂದರ್ಭದಲ್ಲಿ ಎಲ್ಲೆ/ಗಡಿಯನ್ನು ಗುರುತು ಮಾಡಿ ನಿರ್ಬಂಧವಿರುವುದನ್ನು ಈಗಲೂ ಅಲ್ಲಿ ಕಾಣಬಹುದು. ಈ ಕತೆಯ ಮೂಲಕ ಪುರಾಣದ ಒಳಗಿರುವ ವಾಸ್ತವ ಸತ್ಯವನ್ನು ತಿಳಿಯಬಹುದು. ಮತ್ತೆ ತುಳುನಾಡಿನಲ್ಲಿ ಪ್ರಚಲಿತವಾಗಿದ್ದ ಶ್ರೇಣೀಕರಣ ವ್ಯವಸ್ಥೆಯನ್ನು ಕಾಣಬಹುದು. ಮಾತ್ರವಲ್ಲ ತುಳುನಾಡಿನ ಆರಾಧನಾ ಪರಂಪರೆಯಲ್ಲಿ ದೇವರಿಗೆ ಕಾವಲುಗಾರನಾಗಿರುವ ದೈವದ ಚಾರಿತ್ರಿಕ ಮಹತ್ವವನ್ನು ತಿಳಿಯಬಹುದು ಹಾಗೂ ತುಳುನಾಡಿನ ಜನಪದದ ನಂಬಿಕೆ ಪ್ರಕಾರ ತುಳುನಾಡಿನಲ್ಲಿ ದೇವರಿಗಿಂತ ದೈವಗಳು ಹೆಚ್ಚು ಶಕ್ತಿಶಾಲಿಯಾದದು ಮತ್ತು ಪ್ರಭಾವಶಾಲಿಯಾದುದು ಎಂಬುದು.

### 6.1.1 ಒಮ್ಮೆ ಇಳಿಯೇ ಜಂಬುನೇರಳೆಯೇ

ಬಾಲೆ ಮೀನು ಮತ್ತು ಮುಗುಡು ಮೀನಿಗೆ ಸಂಬಂಧಿಸಿದ ಹಾಗೆ ಒಂದು ಪ್ರಸಿದ್ಧ ಜನಪದ ಕತೆ ಇದೆ. ಆ ಕತೆ ಹೀಗಿದೆ.

ಒಂದು ಊರಿನಲ್ಲಿ ಗಂಡ ಹೆಂಡತಿಯರಿದ್ದರು. ಅವರಿಗೆ ಮೊದಲನೆಯ ಗಂಡು ಮಗ, ಬಳಿಕ ಮೂವರು ಹೆಣ್ಣು ಮಕ್ಕಳು. ಒಂದು ದಿನ ಮಗ ಒಂದು ಮಲ್ಲಿಗೆ ದಂಡೆ ತಂದು, ಬಾಗಿಲ ಮೇಲ್ಭಾಗದಲ್ಲಿ ಇಟ್ಟು ತಾಯಿಯಲ್ಲಿ ಹೇಳಿದ, "ಇದನ್ನು ಯಾರು ಮುಡಿಯುತ್ತಾರೋ ಅವರನ್ನು ನಾನು ಮದುವೆಯಾಗುತ್ತೇನೆ." ಅವನು ಹೊರಗೆ ಹೋದ ಮೇಲೆ ತಂಗಿಯರು ಬಂದು ಆ ಹೂವಿಗೆ ಕೈ

ಹಾಕಿದರು. ಆ ತಾಯಿಯು ಮಗಸು ಹೇಳಿದ ವಿಚಾರವನ್ನು ಅವರಲ್ಲಿ ತಿಳಿಸಿದಳು. ಮೊದಲ ಇಬ್ಬರು ತಂಗಿಯರು ಹೂವನ್ನು ಬಿಟ್ಟು ಹೋದರು. ಕಿರಿಯ ತಂಗಿ ಹಟದಿಂದ "ಅಣ್ಣನು ತಂಗಿಯನ್ನು ಮದುವೆಯಾಗಲಾರ" ಎಂದು ಹೇಳಿ, ಆ ಹೂವನ್ನು ತೆಗೆದು ಮುಡಿದುಕೊಂಡಳು. ಅಣ್ಣ ಬಂದ, ವಿಷಯ ತಿಳಿಯಿತು. ತನ್ನ ನಿರ್ಧಾರ ಬದಲಿಸಲಿಲ್ಲ. ಕಿರಿಯ ತಂಗಿಯೊಡನೆ ಆತನ ಮದುವೆಗೆ ಸಿದ್ಧತೆಗಳಾದುವು. ಮದುಮಗಳು ತಪ್ಪಿಸಿಕೊಂಡಾಳೆಂದು, ಆಕೆಯನ್ನು ಒಂದು ಕೋಣೆಯಲ್ಲಿ ಹಾಕಿ, ಆಕೆಗೆ ತೆಂಗಿನಕಾಯಿ ಹೆರೆಯುವ ಕೆಲಸಕೊಟ್ಟರು. ಆಕೆ ಒಂದು ಹೆಗ್ಗಣಕ್ಕೆ ಕಾಯಿಯ ತುರಿಯ ಆಸೆ ತೋರಿಸಿ, ಅದರಿಂದ ಒಂದು ಸುರಂಗಮಾರ್ಗವನ್ನು ತೋಡಿಸಿ, ಅಲ್ಲಿಂದ ತಪ್ಪಿಸಿಕೊಂಡು ಬಂದು, ಒಂದು ಜಂಬುನೇರಳೆ ಮರದ ಮೇಲೆ ಹತ್ತಿ ಕುಳಿತಳು. ಮನೆಯವರೆಲ್ಲಾ ಆಕೆಯನ್ನು ಹುಡುಕಿದರು. ಆಕೆ ಸಿಗಲಿಲ್ಲ. ಆಕೆಯ ಹಿರಿಯ ಅಕ್ಕ ಮುಖ ತೊಳೆಯಲೆಂದು, ಚಿಲುಮೆಯ ಬಳಿಗೆ ಬಂದಾಗ, ಅವಳ ಮೈ ಮೇಲೆ ಒಂದು ಹನಿ ನೀರು ಬಿತ್ತು. ಆಕೆ ತಲೆ ಎತ್ತಿ ನೋಡಿದಾಗ ಬಂಬು ನೇರಳೆ ಮರದ ಮೇಲೆ ತನ್ನ ಕಿರಿಯ ತಂಗಿ ಕುಳಿತುಕೊಂಡು ಅಳುತ್ತಿದ್ದಾಳೆ. ಆಗ ಅಕ್ಕ ತಂಗಿಗೆ ಹೇಳುತ್ತಾಳೆ.

**ತುಳು:** ಒರೊ ಜಪ್ಪು ಜಮನೇರೊಳೋ
ಪಾಡಿ ದೊಂಪೊ ಮಾಲೂಂಡೆ
ಕಡ್ತಿ ಇರೆ ಬಾಡೂಂಡೆ
ಅಡಿ ಉನ್ಪು ಸೆಟ್ಟುಂಡೆ
ಮುತ್ತಿ ಬಚ್ಚಿರೆ ಉಲುಂಗುಡೆ
ಕೂಡಿ ಸಭೆ ಬಿರಿಪ್ಪುಂಡೆ
ಬತ್ತಿ ಬಿನ್ನೆರ್ ಬರೆಳೆಬೆರ್
ಒರೊ ಜಪ್ಪೊ ಜಮನೇರೊಳೋ'

ಆ ಮೇಲೆ ಇನ್ನೊಬ್ಬಳು ಅಕ್ಕ ಬರುತ್ತಾಳೆ. ಅವಳ ಮಾತಿಗೆ ಹಿಂದಿನಂತೆಯೇ ತಂಗಿ ಉತ್ತರ ಕೊಡುತ್ತಾಳೆ. ಆ ಮೇಲೆ ತಾಯಿ ಬರುತ್ತಾಳೆ. ಅವಳು ಮಗಳಲ್ಲಿ:

"ಒರೊ ಜಪ್ಪೊ ಜಮನೇರಳೊ
ಪಾಡಿ ದೊಂಪೊ ಮಾಲೂಂಡೆ
ಕಡ್ತಿ ಇರೆ ಬಾಡೂಂಡೆ
ಅಡಿ ಉನ್ಪು ಸೆಟ್ಟುಂಡೆ
ಮುತ್ತಿ ಬಚ್ಚಿರೆ ಉಲುಂಗುಡೆ
ಕೂಡಿ ಸಭೆ ಬಿರಿಪ್ಪುಂಡೆ
ಬತ್ತಿ ಜಿನ್ನೆರ್ ಬರೆಳೆಬೆರ್

ಒರೊ ಜಪ್ಪೊ ಜಮನೇರೊಳೋ' ಎನ್ನುತ್ತಾಳೆ.

**ಕನ್ನಡ:** (ಒಮ್ಮೆ ಇಳಿಯೇ ಜಂಬುನೇರಳೆಯೇ
ಹಾಕಿದ ಚಪ್ಪರ ಮಾಲುತ್ತಿದೆ
ಕಡಿದ ಎಲೆ ಬಾಡುತ್ತಿದೆ
ಅಟ್ಟ ಅನ್ನ ಕೆಡುತ್ತಿದೆ
ಕಿತ್ತ ವೀಳ್ಯದೆಲೆ ಒಣಗುತ್ತಿದೆ
ಕೂಡಿದ ಸಭೆ ಚೆದರುತ್ತಿದೆ
ಬಂದ ನೆಂಟರು ಹಸಿದಿದ್ದಾರೆ
ಒಮ್ಮೆ ಇಳಿಯೇ ಜಂಬುನೇರಳೆಯೇ)

ಆಗ ಮರದ ಮೇಲಿದ್ದ ಮಗಳು ಹೇಳುತ್ತಾಳೆ:

**ತುಳು:** "ಪಾಡಿ ದೊಂಪೊ ಮಾಲಡ್
ಕಡ್ತಿ ಇರೆ ಬಾಡಡ್
ಅಡಿ ಉನ್ಪು ಸೆಟ್ಟಡ್
ಮುತ್ತಿ ಬಚ್ಚಿರೆ ಉಲುಂಗಡ್
ಕೂಡಿ ಸಭೆ ಬಿರಿಯಡ್
ದುಂಬುದ ಕಾಲೊಡ್ ಅಪ್ಪೇಂದ್ ಲೆತ್ತೆನೆ
ನನದ ಕಾಲೊಡ್ ಮಾಮೀಂದ್ ಲೆಪ್ಪೊಡೆ
ಯಾನ್ ಜಪ್ಪೂಜಿ"

(ಹಿಂದಿನ ಕಾಲದಲ್ಲಿ ತಾಯಿ ಅಂತ ಕರೆದೆ. ಈಗಿನ ಕಾಲದಲ್ಲಿ ಅತ್ತೆಯೆಂದು ಕರೆಯಬೇಕಾ? ನಾನು ಇಳಿಯುವುದಿಲ್ಲ)

ಕೊನೆಗೆ ಅಣ್ಣ ಬರುತ್ತಾನೆ. ಅವನು ತಂಗಿ (ಅಂದರೆ ಈಗ ಮದುಮಗಳು) ಯಲ್ಲಿ–

**ತುಳು:** "ಒರೊ ಜಪ್ಪೊ ಜಮನೇರಳೊ
ಪಾಡಿ ದೊಂಡೊ ಮಾಲೂಂಡೇ
ಕಡ್ತಿ ಇರೆ ಬಾಡೂಂಡೇ
ಅಡಿ ಉನ್ಪು ಸೆಟ್ಟುಂಡೇ
ಮುತ್ತಿ ಬಚ್ಚಿರೆ ಉಲುಂಗುಂಡೇ
ಕೂಡಿ ಸಭೆ ಬಿರಿಪ್ಪುಂಡೇ
ಬತ್ತಿ ಬಿನ್ನೆರ್ ಬರೆಳ್‌ಬೆರ್
ಒರೊ ಜಪ್ಪೊ ಜಮನೇರೊಳೊ' ಎನ್ನುತ್ತಾನೆ..

**ಕನ್ನಡ:** (ಒಮ್ಮೆ ಇಳಿಯೇ ಜಂಬುನೇರಳೆಯೇ

ಹಾಕಿದ ಚಪ್ಪರ ಮಾಲುತ್ತಿದೆ

ಕಡಿದ ಎಲೆ ಬಾಡುತ್ತಿದೆ

ಅಟ್ಟ ಅನ್ನ ಕೆಡುತ್ತಿದೆ

ಕಿತ್ತ ವೀಳ್ಯದೆಲೆ ಒಣಗುತ್ತಿದೆ

ಕೂಡಿದ ಸಭೆ ಚೆದರುತ್ತಿದೆ

ಬಂದ ನೆಂಟರು ಹಸಿದಿದ್ದಾರೆ

ಒಮ್ಮೆ ಇಳಿಯೇ ಜಂಬುನೇರಳೆಯೇ)

ಆಗ ಮರದ ಮೇಲಿದ್ದ ಮಗಳು ಹೇಳುತ್ತಾಳೆ:

**ತುಳು:** "ಪಾಡಿ ದೊಂಪೊ ಮಾಲಡ್

ಕಡ್ತಿ ಇರೆ ಬಾಡಡ್

ಅಡಿ ಉನ್ಪು ಸೆಟ್ಟಡ್

ಮುತ್ತಿ ಬಚ್ಚಿರೆ ಉಲುಂಗಡ್

ಕೂಡಿ ಸಭೆ ಬಿರಿಯಡ್

ಬತ್ತಿ ಬಿನ್ನೆರ್ ಬರೆಲಡ್

ದುಂಬುದ ಕಾಲೊಡ್ ಅಣ್ಣಾಂದ್ ಲೆತ್ತೆನೆಲೆತ್ತೆನೆ

ನನದ ಕಾಲೊಡ್ ಕಂಡನೀಂದ್ ಲೆಪ್ಪೊಡ

ಯಾನ್ ಜಪ್ಪೂಬಿ"

(ಹಾಕಿದ ಚಪ್ಪರ ಮಾಲಲಿ

ಕಡಿದ ಎಲೆ ಬಾಡಲಿ

ಅಟ್ಟ ಅನ್ನ ಕೆಡಲಿ

ಕಿತ್ತ ವೀಳ್ಯದೆಲೆ ಒಣಗಲಿ

ಕೂಡಿದ ಸಭೆ ಚೆದುರಲಿ

ಬಂದ ನೆಂಟರು ಹಸಿಯಲಿ

(ಹಿಂದಿನ ಕಾಲದಲಿ ಅಣ್ಣಾಯೆಂದು ಕರೆದೆ

ಮುಂದಿನ ಕಾಲದಲ್ಲಿ ಗಂಡಾಯೆಂದು ಕರೆಯಬೇಕಲ್ಲ

ನಾನು ಇಳಿಯುವುದಿಲ್ಲ)

ಆಗ ಅಣ್ಣನು ಮರಕ್ಕೆ ಹತ್ತುತ್ತಾನೆ. ತಂಗಿ ಮರದ ಎಲೆ ಎಲೆಗೆ ಹೋಗುತ್ತಾಳೆ. ಆತನೂ ಅಲ್ಲಿಗೆ ಬರುತ್ತಾನೆ. ಆಕೆ ಕೆಳಗಿನ ಮಡುವಿಗೆ ಹಾರಿ, "ಬಾಲೆ ಮೀನು ಆಗುತ್ತಾಳೆ. ಆತನು ಕೆಳಗೆ ಮಡುವಿಗೆ

ಹಾರಿ "ಮುಗುಡು ಮೀನು ಆಗುತ್ತಾನೆ. "ಮುಗುಡು" ಮೀನು "ಬಾಲೆ" ಮೀನನ್ನು ನುಂಗುತ್ತದೆ. ಒಬ್ಬ ಒಂದು ಗಾಳ ಹಾಕಿ ಆ ಮುಗುಡು ಮೀನನ್ನು ಹಿಡಿದು ಮನೆಗೆ ಕೊಂಡು ಹೋಗುತ್ತಾನೆ. ಅಲ್ಲಿ ಮುಗುಡುವನ್ನು ಕೊಯ್ಯುವಾಗ, ಅದರೊಳಗೆ "ಬಾಲೆ"ಮೀನು ಇರುತ್ತದೆ. ಆಗ ಬಾಲೆ ಮೀನು ಹೇಳುತ್ತದೆ ಇವನನ್ನು ಹಾಕಿದ ಪಾತ್ರೆಯಲ್ಲಿ ನನ್ನನ್ನು ಹಾಕಬೇಡ. ಇವನನ್ನು ಬೇಯಿಸಿದ ಪಾತ್ರೆಯಲ್ಲಿ ನನ್ನನ್ನು ಬೇಯಿಸಬೇಡ, ಹಾಗೆಯೇ "ಬಾಲೆ" ಮತ್ತು "ಮುಗುಡು" ಮೀನುಗಳನ್ನು ಬೇರೆ ಬೇರೆ ಪಾತ್ರೆಗಳಲ್ಲಿ ಹಾಕಿ ಬೇಯಿಸುತ್ತಾರೆ. ಈಗಲೂ ಹಳ್ಳಿಗಳಲ್ಲಿ ಈ ಪದ್ಧತಿ ಇದೆ. ಇದು ಯಾಕೆ ಎಂದು ಕೇಳಿದರೆ, ಅದಕ್ಕೆ ಮೇಲಿನ ಕಥೆಯನ್ನು ಹೇಳುತ್ತಾರೆ."

ತುಳು ಜಾನಪದ ಕಥೆಗಳಲ್ಲಿ ಬಹಳ ಜನಪ್ರಿಯವಾಗಿರುವ ಒಂದು ಕಥೆ "ಒರೊ ಜಪ್ಪು ಜಮನೇರಳೋ" (ಒಮ್ಮೆ ಇಳಿಯೇ ಜಂಬುನೇರಳೆಯೇ) ಎಂಬ ಕಥೆ. ಇಲ್ಲಿನ ಗದ್ಯ ಭಾಗ ಮೂಲ ತುಳು ಕಥೆಯ ಸಂಕ್ಷಿಪ್ತ ಕನ್ನಡ ರೂಪಾಂತರ. ಪದ್ಯಭಾಗದಲ್ಲಿ ಮೂಲ ಮತ್ತು ಕನ್ನಡ ಅನುವಾದವನ್ನು ಯಥಾವತ್ತಾಗಿ ಕೊಡಲಾಗಿದೆ. (ಬಿ.ಎ ವಿವೇಕ ರೈ 1985, ಪುಟ 294–297)

ಮೊದಲ ಬಾರಿಗೆ ಕೃತಿಯಲ್ಲಿ ದಾಖಲಾದ ಬಾಲೆಮೀನ್ ಮತ್ತು ಮುಗುಡು ಮೀನು ಕತೆಯನ್ನು ಅನಂತರ ಅದರ ಪಾಠಾಂತರವನ್ನು ವಿವಿಧ ರೀತಿಯಲ್ಲಿ ದೊರೆತಿದೆ. ಆದರೆ ಅವುಗಳನ್ನು ದಾಖಲಿಸಿದೆ. ಆರಂಭದಲ್ಲಿ ಸಿಕ್ಕಿರುವ ದಾಖಲೆಯನ್ನು ಮಾತ್ರ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಕತೆಯಲ್ಲಿ ರಕ್ತಸಂಬಂಧಿಗಳಲ್ಲಿ ವಿವಾಹ ನಿಷಿದ್ಧತೆಯನ್ನು ಸೂಚಿಸುತ್ತದೆ. ಹಠ ಪ್ರವೃತ್ತಿಯಿಂದ ಹೂ ಮುಡಿದುಕೊಂಡ ಕಾರಣಕ್ಕಾಗಿ ಆ ನಂತರ ಆಕೆ ಪಡುವ ಸಂಕಟ ಗಂಡು ತಾನು ಆಡಿದ ಮಾತನ್ನು ಉಳಿಸಬೇಕೆಂಬ ಕಾರಣಕ್ಕೆ ಕಠಿಣ ನಿರ್ಧಾರವನ್ನೇ ತಾಳುವ ರೀತಿಯನ್ನು ಕಾಣಬಹುದು.

### 6.1.2 ಮೀನ್ ಕುಮಾರನ ಕತೆ

ಒಂದು ಊರಲ್ಲಿ ಒಬ್ಬ ಅರಸು. ಆ ಅರಸನಿಗೆ ಮೊದಲು ಮದುವೆ ಆಗಿತ್ತು. ಮದುವೆ ಆಗಿ ಒಬ್ಬಳು ಮಗಳು ಹುಟ್ಟಿದಳು. ಮಗಳಿಗೆ ಆರೇಳು ವರ್ಷ ಆಗುವಾಗ ಹೆಂಡತಿ ತೀರಿಕೊಂಡಳು. ತೀರಿ ಹೋದ ಮೇಲೆ ಅವನಿಗೆ ಗತಿ ಇಲ್ಲ. ಹೆಂಡತಿ ಇಲ್ಲ ಅಲ್ವ, ಆ ಅರಸು ಮನೆತನದವರಿಗೆ ಹೆಣ್ಣು ಇಲ್ಲವೆಂದು ಎಲ್ಲರಿಗೂ ಬೇಸರದ ಸಂಗತಿಯಾಯಿತು. ಅರಸು ಮನೆತನಕ್ಕೆ ಗತಿ ಇಲ್ಲವೆಂದು ಪ್ರಜೆಗಳನ್ನು ಬರಲು ಹೇಳುತ್ತಾನೆ. ಮಂತ್ರಿಯನ್ನೂ ಬರ ಹೇಳುತ್ತಾನೆ. 'ನನಗೊಂದು ಹೆಣ್ಣು ನಿಶ್ಚಯ ಮಾಡಬೇಕು. ನೀನು ಎಲ್ಲಿಯಾದರೂ ಹೋಗು'. ಹಾಗೆ ಮಂತ್ರಿ ಊರಲ್ಲಿ ಹೆಣ್ಣು ಹುಡುಕುತ್ತಾ ಹೋದ. ಒಂದು ಊರಿನಿಂದ ಮತ್ತೊಂದು ಊರಿಗೆ, ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಹೋದನು. ಇಲ್ಲಿಂದ ಮಡಿಕೇರಿಗೆ ಮಡಿಕೇರಿಯಿಂದ ಭಾಗಮಂಡಲಕ್ಕೆ, ಭಾಗಮಂಡಲದಿಂದ ತಿರುಗಿ ಬರುವಾಗ ಕರಿಕೆ ರೋಡಿಗೆ ಬರುವಾಗ ಒಂದು ಹೆಣ್ಣು ಮಗಳೂ ಒಂದು ಹೆಂಗಸೂ ಬಹಳ ಸುಂದರಿ ಹೆಂಗಸು ಮಾತನಾಡುತ್ತಾ ಹೋಗುತ್ತಿದ್ದಾರೆ. ನೀವೆಲ್ಲಿಗೆ ಹೋಗುವುದು? 'ನನ್ನ ಗಂಡ ಮೊನ್ನೆ ಸತ್ತೊಗಿದ್ದಾನೆ. ಈಗ

ನನಗೆ ಯಾರೂ ಗತಿ ಇಲ್ಲ. ಹಾಗೆ ನಾನು ಮಗಳನ್ನು ಕರೆದುಕೊಂಡು ಹೋಗುವುದು' 'ಅಯ್ಯೋ ಅಯ್ಯೋ ನಮ್ಮ ರಾಜ್ಯದಲ್ಲಿ ಕೂಡ ಹಾಗೆ. ಒಂದು ಹೆಣ್ಣು ಬೇಕಂತ ಹುಡುಕಲು ನನ್ನನ್ನು ಕಳಿಸಿದ್ದಾರೆ. ಅವರಿಗೆ ಮೊದಲು ಮದುವೆ ಆಗಿರುವುದರಿಂದ ಕೈ ಧಾರೆ ಕೊಡುವುದಿಲ್ಲ. ಅದಕ್ಕೆ ನಿರ್ಧಾರವೆಂದು ನನ್ನೊಂದಿಗೆ ಹೇಳಿದ್ದಾರೆ. ನನಗೆ ಪತ್ರವನ್ನೂ ಕೊಟ್ಟಿದ್ದಾರೆ. ರೂಪ ಲಾವಣ್ಯ ನೋಡಿ ಹೆಣ್ಣು ನೋಡಬೇಕು ಎಂದು ಹೇಳಿದ್ದಾರೆ. ನಾನು ಅವರ ಮಂತ್ರಿ. ಹಾಗೆ ನಾನು ಬಂದಿರೋದು' ಎಂದು ಹೇಳಿದ. ಹಾಗಾದರೆ ನಾನು ಬರುತ್ತೇನೆ. ನನ್ನನ್ನು ಮದುವೆ ಮಾಡುವುದಾದರೆ ಮಾಡಲಿ. ಮನೆ ಎಲ್ಲ ಶೃಂಗಾರ ಮಾಡಿ, ಅಲ್ಲಿಯೇ ಒಂದು ಅರಸು ಮನೆತನದ ರೂಮಲ್ಲಿ ನಾನು ಇರುವಂತೆ ಮಾಡಲಿ. ಅಲ್ಲಿಂದ ಮತ್ತೆ ಕಾರ್ಯಕ್ರಮಕ್ಕೆ ಆಗುವಾಗ ಕರೆದುಕೊಂಡು ಹೋದರೆ ಸಾಕು' ಎಂದು ಹೇಳಿದಳು.

ಮಂತ್ರಿ ಅವಳನ್ನು ಚೆನ್ನಾಗಿ ಮೀಯಿಸಿ ತನ್ನ ಮನೆಗೆ ಕರೆದು ತಂದನು. ಮರುದಿನ ಅರಮನೆಗೆ ಕರೆದುಕೊಂಡು ಹೋದನು. ಅರಸು ಮನೆಯಲ್ಲಿ ಈಗಿನ ಬುಡುದಾರೆ ಕ್ರಮದಲ್ಲಿ ಮದುವ ಕ್ರಮ ಆಯಿತು. ಮದುವೆ ಆಗಿ ಅವರು ಹಾಗೆ ಸ್ವಲ್ಪ ಸಮಯ ಸುಖವಾಗಿ ಇದ್ದರು. ಆಗ ಅರಸು ಮನೆಸ್ಥನದಲ್ಲಿ ಅದು ಪಟ್ಟದ ರಾಣಿ. ಈ ಎರಡನೆ ಹೆಣ್ಣು. ಈ ಮೊದಲ ಹೆಂಡತಿ ಮಗಳು ಸ್ವಲ್ಪ ದೊಡ್ಡವಾದಳು. ಅವಳನ್ನು ದನ ಕಾಯಲು ಕಳಿಸಿದರು. ಅಡುಗೆ ಎಲ್ಲ ಬಿಟ್ಟಳು. ಇದಕ್ಕೆ ಬಾರಿ ಕಷ್ಟ ಆಯಿತು. ದನ ಕಾಯೋದಕ್ಕಾದರೂ ಹೋಗುತ್ತೇನೆಂದು ಹೇಳಿ ಚಿಕ್ಕವ್ವನೊಂದಿಗೆ ಹೇಳಿ ಹೋದಳು. ಹಾಗೆ ದನಕಾಯುವುದಕ್ಕೆ ಹೋಗಿ... ಹೋಗಿ... ಹೋಗಿ ಇವಳಿಗೆ ಯಾವಾಗಲೂ ಊಟ ಕೊಡುವುದಿಲ್ಲ. ಆದರೂ ಇವಳು ಬಹಳ ಸುಂದರಿ ಹುಡುಗಿಯಾದಳು. ಇನ್ನು ನನ್ನ ಮಗಳು ಕುರುಡಿಯನ್ನು ಇವರು ನೋಡುವುದಿಲ್ಲ? ಈ ಅರಸು ಮೊದಲ ಹೆಂಡತಿ ಮಗಳನ್ನು ಪ್ರೀತಿಯಲ್ಲಿ ಸ್ನಾನ ಮಾಡಿಸುವುದು, ತಲೆಗೆ ಎಣ್ಣೆ ಹಾಕಿ ಬಾಚುವುದನ್ನು ಕಂಡು ಇವರ ಮಗಳನ್ನೇ ಹೊಗಳುತ್ತಾರೆಂದು ಹೇಳಿ ನಂಜಾಯಿತು. ನನ್ನ ಮಗಳನ್ನು ನೋಡುವಂತೆ ಮಾಡಿದಳು. ಇವನು ಅರಮನೆಗೆ ಹೋಗುವಾಗ ಮೊದಲ ಹೆಂಡತಿ ಮಗಳನ್ನು ಹೊಡೆದು ಕಷ್ಟ ಕೊಡುವುದು. ಹೀಗೆ ಅವಳು ಇನ್ನು ದನ ಮೇಯಿಸಲು ಹೋಗುವೆನೆಂದು ಹೇಳಿದಳು. ಚಿಕ್ಕಮ್ಮ ಇವಳಿಗೆ ತಂಗಳನ್ನ ನೀರು ಕೊಡುವುದು. ಇವಳು ಆಚೆ ಈಚೆ ಕೈ ಹಾಕಿ ಅಕ್ಕಚ್ಚಿಗೆ ಸುರಿಯುತ್ತಿದ್ದಳು. ಹಾಗೆ ದನಮೇಯಿಸಲು ಉಪವಾಸ ಹೋಗುವುದು. ಹೀಗೆ ಹೋಗಿ ಹೋಗಿ ಮಳೆಗಾಲ ಹಿಡಿಯಿತು. ಅವಳ ಅಮ್ಮ ಸತ್ತು ದೊಡ್ಡ ಬಯಲಲ್ಲಿ ಸುಟ್ಟಿದ್ದಾರೆ. ಅವಳ ಸುಟ್ಟ ಜಾಗ 'ದೂಪೆ' ಹತ್ತಿರ ಕಾಡು ತೊಂಡೆಕಾಯಿ ಬಳ್ಳಿ ಹಬ್ಬಿಕೊಂಡಿತ್ತು. ಅದರಲ್ಲಿ ತುಂಬ ಕಾಡು ತೊಂಡೆಕಾಯಿ. ಅವಳು ಏನು ಮಾಡಿದಳು? ಈ ಕಾಡು ತೊಂಡೆಕಾಯಿಯನ್ನು ಚೆನ್ನಾಗಿ ಕೊಯ್ದು ದಿನಕ್ಕೆ ಹತ್ತರಷ್ಟು ತಿನ್ನುತ್ತಿದ್ದಳು. ಒಂದು ದಿನ ಈ ತೊಂಡೆಕಾಯಿ ಕೊಯ್ದು, ಕಪಿಲೆ ಹಸು ಹಾಲು ಕರೆದಳು. ಅದನ್ನು ಹಿಚುಕಲು ಮನೆಯಿಂದ ಹಾಳೆ ಏನಾದ್ರು ತರುತ್ತಿದ್ದಳು. ಈ ಕಾಡು ತೊಂಡೆಕಾಯಿ ಮತ್ತು ಹಾಲನ್ನು ಒಟ್ಟು ಹಿಚುಕಿ ನೀರು ಮಾಡಿ ಕುಡಿಯುತ್ತಿದ್ದಳ. ಕುಡಿದು ಮನೆಗೆ ಬರುತ್ತಿದ್ದಳು. ದನಗಳನ್ನು ಕಟ್ಟಿ ಹಾಕಿ ಕರು ಬಿಟ್ಟು ಹಾಲು ಕರೆಯುತ್ತಿದ್ದಳು. ಹಾಲನ್ನು ಕಾಯಿಸಿ ಇರಿಸಿದ್ದೇನೆಂದು ಚಿಕ್ಕಮ್ಮನೊಂದಿಗೆ ಹೇಳಿ

ಹೊರಗೆ ಹೋಗುತ್ತಿದ್ದಳು. ಚಿಕ್ಕಮ್ಮ ಹಾಲಿನ ಮೇಲಿನ ಕೆನೆಯನ್ನು ತೆಗೆದು ತನ್ನ ಕುರುಡಿ ಮಗಳಿಗೆ ಕೊಡುವುದು. ಆ ಮೇಲೆ ಇವಳೊಂದಿಗೆ ನಿನಗೆ ಅಲ್ಲಿ ಹಾಳೆ ಬಟ್ಟಲಲ್ಲಿ  ಗಂಜಿ ಇಟ್ಟಿರುವೆನೆಂದು ಹೇಳುತ್ತಿದ್ದಳು. ಬೇಕಾದರೆ ತಿನ್ನು ಎಂದು ಹೇಳುತ್ತಿದ್ದಳು. ಆ ಗಂಜಿಯಲ್ಲಿ ನೊಣವೋ ಇನ್ನೇನಾದರೂ ಕಸ ಬಿದ್ದುಕೊಂಡಿರುತ್ತದೆ. ಇವರು ಉಂಡು ಬಿಟ್ಟ ಅನ್ನವನ್ನು ಅವಳ ತಟ್ಟೆಗೆ ಹಾಕುತ್ತಿದ್ದರು. ಇವಳು ಉಪವಾಸವೆ ಇದ್ದು, ಮಾರನೆ ದಿನ ಕಾಡು ತೊಂಡೆಕಾಯಿ ಮತ್ತು ಕಬಿಲೆ ಹಸುವಿನ ಹಾಲು ಕುಡಿದು ಹೊಟ್ಟೆ ತುಂಬಿಸುತ್ತಿದ್ದಳು. ಹೀಗೆ ಇವಳು ದಿನದಿಂದ ದಿನಕ್ಕೆ ದಪ್ಪ ಆಗಿ ಚಂದ ಕಾಣುತ್ತಿದ್ದಳು. ಒಂದು ದಿನ ಚಿಕ್ಕಮ್ಮ ಅರಸನೊಂದಿಗೆ 'ನಿಮ್ಮ ಮಗಳು ದಿನದಿಂದ ದಿನಕ್ಕೆ ಮಡ್ಡಮ್ಮನಂತೆ ಕಾಣಿತ್ತಾಳೆ ಏನು? ಎಂದಳು. ನಿಮ್ಮ ಸಂಬಂಧದವರು ನೆರೆಕರೆಯಲ್ಲಿ ಎಲ್ಲಾದರೂ ಇದ್ದರೋ ಏನೋ? ಅವಳು ಈ ತರಹ ಹೇಗೆ ಆದಳು? ಇದು ನಾಳೆಗೆ ನಮಗೆ ಕೆಟ್ಟ ಹೆಸರು ಬರಬಹುದೋ ಏನೋ? ಎಂದಳು.

ಅರಸು ನನ್ನ ಮಗಳು ಎಂತಹವಳೆಂದು ನನಗೆ ಗೊತ್ತಿದೆ. ಅವಳ ಕಷ್ಟ ಏನೆಂದು ನನಗೆ ಗೊತ್ತಿದೆ. ಹಾಗೆ ಇರೋವಾಗ ಈ ಚಿಕ್ಕಮ್ಮನ ಮಗಳು ಕುರುಡಿ ಅಕ್ಕ ಕ್ಕ ದನ ಮೇಯಿಸಲು ನಾನೂ ಬರಬೇಕ' ಎಂದು ಕೇಳಿದಳು. 'ಅಯ್ಯೋ ನೀನು ಬರಬೇಡ. ಅಲ್ಲಿಗೆ ಹೋಗುವಾಗ  ಮಳೆಗೆ ಒದ್ದೆಯಾಗಿ ಹೋಗಬೇಕು. ಕಲ್ಲು-ಮುಳ್ಳು ಮೆಟ್ಟಿಕೊಂಡು ಹೋಗಬೇಕು. ನನ್ನಲ್ಲಿ ಒಂದೇ 'ಪಣೆಗೊರಬೆ' ಇರುವುದು. ಅದರಲ್ಲಿ ನಾವಿಬ್ಬರು ಒದ್ದೆಯಾಗಿಕೊಂಡು ಹೇಗೆ ಹೋಗುವುದು? ನೀನು ಬರಬೇಡ ಎಂದಳು. ಆ ದಿನ ಅವಳು ದನ ಮೇಯಿಸಲು ಹೋದಳು. ಹೋಗಿ ಎರಡು ಹಸುಗಳ ಹಾಲು ಹಿಂಡಿ ಕಾಡುತೊಂಡೆಕಾಯಿ ಹಿಚುಕಿ ಹೊಟ್ಟೆ ತುಂಬ ಕುಡಿದಳು. ಮಾರನೆ ದಿನ ನಾನೂ ಬರುತ್ತೇನೆಂದು ಈ ಕುರ್ಡಿ  ಜೊತೆಗೆ ಹೊರಟಳು. ಇವಳು ಕರೆದುಕೊಂಡು  ಹೋಗಿ ಎಲ್ಲ ತೋರಿಸಿದಳು. ಈ ಕುರ್ಡಿಗೆ ಇದ್ದ ಅಡ್ಕ, ಕಲ್ಲು ಮುಳ್ಳಂತ ಎಲ್ಲ ಕಡೆ ತಿರುಗಿಸಿದಳು. ಆ ದಿನ ಹಾಲು ಹಿಂಡಲಿಲ್ಲ. ಸಂಜೆ ಮನೆಗೆ ಬಂದ ಕುರ್ಡಿ ಮಗಳು ಅಲ್ಲಿ ಕಷ್ಟ ಬಂದದ್ದನ್ನೆಲ್ಲಾ ವಿವರಿಸಿ ಹೇಳಿದಳು. ಆ ದಿನ ಸಾಯಂಕಾಲ ಇವರಿಬ್ಬರೂ ಬಂದು ದನಗಳಿಗೆ ಕೊಡುವ ಅಕ್ಕಚ್ಚು ಕುಡಿದರು. 'ನಾಳೆ ಅಕ್ಕನೊಂದಿಗೆ ನಾನು ಹೋಗುವುದಿಲ್ಲ. ಅವಳೊಂದಿಗೆ ಹೋದರೆ ಸತ್ತು ಹೋಗುವರು'. ಮಾರನೆಯ ದಿನ ನೆರೆಕರೆಯ ಹೆಂಗಸು ಬಂದಳು. ಅವಳೊಂದಿಗೆ ತನ್ನ ಮಗಳನ್ನು ಕುರ್ಡಿಯಾದರೂ ಯಾರೂ ಮದುವೆಯಾಗುವರು. ಇಷ್ಟು ದೊಡ್ಡ ಮನೆತನದಲ್ಲಿ ಇದ್ದ ಮೇಲೆ ಯಾರೂ ಮದುವೆಯಾಗಿ ಕರೆದುಕೊಂಡು ಹೋಗುವರು. ಎಷ್ಟಾದರೂ ಅರಸರ ಮಗಳಲ್ವೇ ಎಂದು ಜಂಬ ಕೊಚ್ಚಿದಳು. ನನ್ನ ಮಗಳಿಗೆ ಯಾವ ತಿಂಡಿ ಕೊಟ್ಟರೂ ಚೆಂದ ಆಗುವುದಿಲ್ಲ? 'ಅಯ್ಯೋ ಅಕ್ಕ ನೀವು ಒಂದು ಸಂಗತಿ ಮಾಡಿ. ಅಕ್ಕಿಯನ್ನು ತೊಳೆದು ಹಾಲಲ್ಲಿ ಬೇಯಿಸಿರಿ. ಅದರ ಗಂಜಿಯನ್ನು ನಿಮ್ಮ ಮಗಳಿಗೆ ಕೊಡಿ. ಆದರೆ ನೀರನ್ನು ನಿಮ್ಮ ಅರಸನ ಮೊದಲ ಹೊಂಡತಿ ಮಗಳಿಗೆ ಕೊಡಿ' ಎಂದಳು. ಯಾರು? ಈ ನೆರೆಕರೆಯ ಹೆಂಗಸು.

ಇವಳು ಹೀಗೆ ಒಂದು ಆರು ತಿಂಗಳು ಹೀಗೆ ಮಾಡಿರಬೇಕು. ಈ ಕುರ್ಡಿ ಅಲ್ಲಿಗೆ ಇನ್ನೂ ಸಣ್ಣ ಆದಳು. ಅರಸುನ ಮೊದಲ ಹೆಂಡತಿ ಮಗಳು ಇನ್ನೂ ಚಂದ ರೂಪದ ಹುಡುಗಿಯಾದಳು. ನೀನು ಇನ್ನೊಂದು ದಿನ ಅಕ್ಕನೊಂದಿಗೆ ಹೋಗು ಎಂದು ಹಠ ಮಾಡಿ ಕುರ್ಡಿಯನ್ನು ಕಳುಹಿಸಿದಳು. ಅವಳು ಒಬ್ಬಳೇ ಹೋಗುವುದಲ್ಲ. ಪ್ರಾಯಕ್ಕೆ ಹೆಣ್ಣು ಮಗಳು ಅಲ್ಲವೇ. ಹತ್ತು ಹದಿನಾರು ವರ್ಷದ ಹೆಣ್ಣುಮಗಳನ್ನು ಒಬ್ಬಳನ್ನೇ ಕಾಡಿಗೆ ಕಳುಹಿಸುವುದು ಒಳ್ಳೆಯದಲ್ಲ. ಆ ದಿನ ಇವಳು ಕುರ್ಡಿಗೂ ಕಾಡುತೊಂಡೆಕಾಯಿ, ಹಸು ಹಾಲು ಹಿಂಡಿ ಕುಡಿಯಲು ಕೊಟ್ಟಳು. ಸಂಜೆ ಮನೆಗೆ ಬಂದರು. ಅಮ್ಮನೊಂದಿಗೆ ನಡೆದ ಎಲ್ಲಾ ಕತೆಯನ್ನೂ ಬಿಡದೆ ಹೇಳಿದಳು. ಅಮ್ಮ ನಿನಗೆ ಗೊತ್ತಿದೆಯಾ? ' ಅಕ್ಕ ನಮ್ಮ ಕಬಿಲೆ ಹಸುವನ್ನು ಹಾಲು ಹಿಂಡಿ, ತೊಂಡೆಕಾಯನ್ನು ಜೊತೆಗೆ ಹಿಚುಕುವಳು. ನನಗೂ ಸ್ವಲ್ಪ ಕೊಟ್ಟಳು. ಅವಳಿಗೆ ಅನ್ನವೂ ಬೇಡ ಏನೂ ಬೇಡ? ಆ ದೊಪೆ ಹತ್ತಿರ ತುಂಬ ಮೆದು ಮಣ್ಣು ಇದೆ' ಎಂದು ನಡೆದದ್ದನ್ನೆಲ್ಲಾ ಹೇಳಿದಳು. ಹಾಗಾದರೆ 'ನಾಳೆ ನೀನು ಹೋಗುವಾಗ ಒಂದು 'ಕುಂಞ' ಕತ್ತಿ ತೆಗೆದುಕೊಂಡು ಹೋಗು' ಹೀಗೆ ಅಮ್ಮ ಹೇಳಿದಳು. ಮಾರನೆ ದಿನ ಅಕ್ಕ 'ನೀನು ಬರುವುದು ಬೇಡವೆಂದರೂ ಹೋಗು'. ಆ ಕಾಡು ತೊಂಡೆಕಾಯಿಯ ಬಳ್ಳಿಯನ್ನು ಕೊಯ್ದು ಹಾಕು ಎಂದಳು ಅಮ್ಮ. ಮರುದಿನ ಕುರ್ಡಿ ಜೊತೆಗೆ ಬಂದಳು. ಆ ದಿನ ಅವಳಿಗೆ ಇನ್ನೂ ಹೆಚ್ಚು ಕುಡಿಯಲು ಕೊಟ್ಟಳು. ಅವಳು ಈ ಕಾಡು ತೊಂಡೆಕಾಯಿ ಮತ್ತು ಹಾಲನ್ನು ಹಿಚುಕುವಾಗ ಈ ಬಳ್ಳಿಯ ಬುಡವನ್ನು ಕೊಯ್ದು ಬಿಟ್ಟಳು. ಅಕ್ಕನೊಂದಿಗೆ ಬೇಗ ಮನೆಗೆ ಹೋಗೋಣವೆಂದು ಹೇಳಿದಳು. ಆ ದಿನ ಇವಳಿಗೆ ಒಳ್ಳೆಯ ಊಟ, ಮಲಗಳು ಒಳ್ಳೆಯ ಹಾಸಿಗೆ, ಹೊದಿಕೆ ಕೊಟ್ಟಳು.

ಮರುದಿನ ಈ ಕುರ್ಡಿ ಕಾಡಿಗೆ ಬರಲಿಲಲ್ಲ. ಬಾ ಎಂದು ಕರೆದರೂ ಬರಲಿಲ್ಲ. ನನಗೆ ಮುಳ್ಳು ಚುಚ್ಚುತ್ತದೆ ಬರುವುದಿಲ್ಲವೆಂದಳು. ಅವಳು ಅಲ್ಲಿ ಹೋಗಿ ನೋಡಿದ್ರೆ ಈ ಕಾಡುತೊಂಡೆಕಾಯಿ ಬಳ್ಳಿ ಪೂರ್ತಿ ಬಾಡಿದೆ. ಇದು ಆ ಕುರುಡಿಯದ್ದೇ ಕೆಲಸ ಆಗಿರಬೇಕೆಂದು ತಿಳಿದಳು. ಹೀಗೆ ನನ್ನ ಭಾಗ್ಯವೇ ಹೋಯಿತೆಂದು ತಿಳಿದು ಅದರಲ್ಲಿದ್ದ ಕಾಯಿಗಳನ್ನು ಬಳ್ಳಿ ಒಣಗುವವರೆಗೂ ಕೊಯ್ದು ತಿಂದಳು. ಮನೆಗೆ ಬಂದಳು.

ಒಂದು ಊರಿನ ಅರಸು. ಅವನ ಹೆಂಡತಿಗೆ ಒಬ್ಬ ಮಗ ಹುಟ್ಟಿದ. ಆ ಮಗು ಮೀನಿನ ಆಕಾರದಲ್ಲಿತ್ತು. ಮೀನು ಒಂದು ತಿಂಗಳಾಗುವಾಗ ಸ್ವಲ್ಪ ದೊಡ್ಡದಾಯಿತು. ಅದನ್ನು ಮನೆ ಹತ್ತಿರದ ಕೆರೆಯಲ್ಲಿ ಹಾಕಿದ. ಈ ಅರಸು ದಿನಾ ಬೆಳಗ್ಗೆ ಎದ್ದು ಈ ಕೆರೆಗೆ ಮುಖ ತೊಳೆಯಲು ಬರುವುದು. ಒಂದು ದಿನ ಈ ಮೀನು 'ನನಗೆ ಹೆಣ್ಣು ಕೊಡುತ್ತಿಯಾ ಅಲ್ಲ ನಿನ್ನನ್ನು ತಿನ್ನಬೇಕಾ?' ಎಂದಿತು. ಹಾಗಾಗಿ ಆ ಊರಿನಲ್ಲಿದ್ದ ಎಲ್ಲಾ ಹೆಣ್ಣುಮಕ್ಕಳನ್ನು ಕೆರೆಯ ಹತ್ತಿರ ಶೃಂಗಾರ ಮಾಡಿ ಬಿಡುವುದು. ಆ ಮೀನು ತಿಂದು ಮುಗಿಸುವುದು. ಹೀಗೆ ನಡೆದು ಆ ಊರಿನಲ್ಲಿ ಹೆಣ್ಣು ಮುಗಿಯಿತು. ಹಾಗೆ ಆ ಅರಸ ಬಂದು ಹೆಣ್ಣು ಕೇಳಿದ. ನನ್ನೊಂದಿಗೆ ಅಮ್ಮ ಇಲ್ಲದ ತಬ್ಬಲಿ ಮಗಳಿದ್ದಾಳೆ. ಅವಳನ್ನು ಮಗ ಮೀನುಕುಮಾರನಿಗೆ

ಮದುವೆ ಮಾಡಲು ಕೇಳಿದ. ಈ ಅರಸ ಮಗಳನ್ನು ಮದುವೆ ಮಾಡಿಕೊಡಲು ಒಪ್ಪಿದ್ದಾನೆ. ಮದುವೆ ನಿಘಂಟು ಆಗಿದೆ. ಈ ವಿಷಯವನ್ನು ಕುರ್ದಿ ಅಕ್ಕನಿಗೆ ವಿವರವಾಗಿ ಹೇಳಿದಳು.

ಇವಳು ಆ ದಿನ ದನಗಳೆಲ್ಲ ಕಟ್ಟಿ ಹಾಕಿ 'ನಾಳೆಯಿಂದ ಮೇಲೆ ನಿಮ್ಮ ಚಾಕರಿ ಮಾಡಲು ನಾನಿಲ್ಲ' ಎಂದಳು. ಆಗ ದನಗಳು 'ಬೆರೆಬೆರೆ' ಎಂದು ಕರೆದವು/ಅತ್ತವು. ಆಗ ಆಕಾಶದಿಂದ ಅಶರೀರವಾಣಿ ಕರೆ ಕೇಳಿತು. 'ನಿನ್ನ ಅಮ್ಮನ ದೂಪೆಯಿಂದ ಎಡಭಾಗದಲ್ಲಿ ಈಶಾನ್ಯದಲ್ಲಿ ಒಂದು ನಾಗರ ಹುತ್ತ ಇದೆ. ಈ ಹುತ್ತದಲ್ಲಿ ಒಂದು ಸರ್ಪ ಪ್ರಾಣ ಸಂಕಟದಲ್ಲಿದೆ. ಆ ಹುತ್ತವನ್ನು ಮುರಿಯಬೇಕು. ನೀನು ಮುರಿದರೆ ಆ ಸರ್ಪದ ನೋವು ಒಡೆಯುತ್ತದೆ.' ಇದು ದೈವ ಕಾರ್ಯವೆಂದು ತಿಳಿದ ಅವಳು ಮೀನಿನ ಜೊತೆ ಸಾಯುವುದಕ್ಕಿಂತ ಹಾವಿನೊಂದಿಗೆ ಸಾಯುವುದು ಉತ್ತಮವೆಂದು ಆ ಸರ್ಪದ ಹತ್ತಿರ ಬಂದು ಹುತ್ತದ ಒಳಗೆ ಕೈ ಹಾಕುವಳು. ಈ ತಬ್ಬಲಿ ಮಗಳ ಕೈ ಸೋಂಕಿನಿಂದ ಆ ಸರ್ಪದ ನೋವು ಒಡೆದು ಗುಣವಾಯಿತು. ಆಗ ಆ ಸರ್ಪ 'ನೀನು ಏನಾಗಿ ಬಂದೆ ಮಗಳೇ' ಎಂದು ಕೇಳಿತು. ತನ್ನ ಕಷ್ಟವನ್ನು ಸರ್ಪಕ್ಕೆ ಹೇಳಿದಳು. ಅಯ್ಯೋ ಮಗಳೆ 'ನಿನ್ನನ್ನು ನಾನು ಕೊಲ್ಲುವುದಿಲ್ಲ. ನಿನಗೆ ಮೂರು ಕಲ್ಲು ಮಂತ್ರಿಸಿ ಕೊಡುತ್ತೇನೆ. ಇದನ್ನು ನಿನ್ನ ಉಡಿಯಲ್ಲಿ ಗಟ್ಟಿಯಾಗಿ ಕಟ್ಟಿಕೋ. ನಿನ್ನನ್ನು ಶೃಂಗಾರ ಮಾಡಿ ಬಾವಿಕಟ್ಟೆಗೆ ಕರೆದುಕೊಂಡು ಹೋಗುವರು. ಬಾವಿ ಕಟ್ಟೆಯಲ್ಲಿ ದೀಪ ಉರಿಸಿ ನಿನ್ನನ್ನು ಬಿಟ್ಟು ಹೋಗುವರು. ಆಗ ಕತ್ತಲೆ. ಸುಮಾರು ಒಂಬತ್ತುವರೆ ಗಂಟೆಗೆ ಆ ಮೀನು ಬರುತ್ತದೆ. ಬಂದಾಗ ಈ ಮಂತ್ರಾಕ್ಷತೆಯ ಕಲ್ಲನ್ನು ಗುರಿಯಿಟ್ಟು ಹೊಡಿ' ಎಂದು ಸರ್ಪ ಹೇಳಿತು.

ಸರ್ಪ ಹೇಳಿದಂತೆ ಎಲ್ಲವೂ ನಡೆದುವು. ಅವಳಲ್ಲಿ ಇರುವುದು ಮಂತ್ರಾಕ್ಷತೆಯ ಕಲ್ಲಲ್ಲ? ಅವಳು ಹೇಗೆ ಹೊಡೆದರೂ ಆ ಕಲ್ಲು ಮೀನಿಗೆ ತಾಗುತ್ತದೆ. ಹೀಗೆ ಮೂರು ಬಾರಿ ಮೀನು ಬಂದಾಗ ಕಲ್ಲು ಎಸೆದಳು. ಮೀನು ಒಂದು ಸುಂದರ ಹುಡುಗನಾಗಿ ನೀರಿನಿಂದ ಹೊರಬಂದ. ಮರುದಿನ ಆ ಬಾವಿಕಟ್ಟೆಯಲ್ಲಿ ಮೀನುಕುಮಾರನೂ ಸೊಸೆಯೂ ಮಾತನಾಡುತ್ತಾ ಇದ್ದಾರೆ. ಅರಸನಿಗೆ ಇವರನ್ನು ನೋಡಿ ಖುಷಿಯಾಯಿತು. ಅವರನ್ನು ಕರೆದುಕೊಂಡು ಬಂದು ಮನೆ ತುಂಬಿಸಿಕೊಂಡರು. ಮದುವೆಗೆ ಏರ್ಪಾಡು ಮಾಡಿದರು. ಧಾರೆಕಾರ್ಯಗಳನ್ನು ಮಾಡಿದರು. ಊರಿಗೆ ಡಂಗುರ ಸಾರಿದರು. ಈ ಹೆಣ್ಣು ಕೊಟ್ಟ ಅರಸನನ್ನೂ ಬರ ಹೇಳಿದರು. ಮದುವೆ ಶೇಷೋಪಚಾರ ಎಲ್ಲ ಕಳೆಯಿತು. ಹೆಣ್ಣು ಕೊಟ್ಟವರಿಗೆ ಉಡುಗೊರೆ ನೀಡಿದರು. ಅವರೆಲ್ಲ ಮೆರೆಯುತ್ತಾ ಚೆನ್ನಾಗಿದ್ದಾರೆ. ಅಲ್ಲಿಗೆ ಕತೆ ಮುಗಿಯಿತು.(ಕಥಾ ನಿರೂಪಕ: ಲಿಂಗಪ್ಪ ಗೌಡ; ಉರುಂಡೆ;](ಡಾ. ವಿಶ್ವಾನಾಥ ಬದಿಕಾನ 2016, 224–228)

### 6.2 ಮೀನನ್ನು ಕುರಿತ ಬಿಡಿ ಹಾಡುಗಳು

ತುಳುನಾಡಿನ ಬಿಡಿ ಕವಿತೆಗಳನ್ನು 'ಕಬಿತೆ' ಎಂದು ಕರೆಯುತ್ತಾರೆ. ಅನಕ್ಷರಸ್ಥ ಜನರು ತಮ್ಮ ಅನುಭವ ನೆಲೆಯಲ್ಲಿ ಸಂತೋಷ, ಸುಖ–ದುಃಖಗಳನ್ನು ಹಂಚಿಕೊಳ್ಳಲು ಹೆಣೆದ ಹಾಡುಗಳ ಕಬಿತೆಗಳು

ತಮ್ಮ ಬದುಕಿನಲ್ಲಿ ಕಂಡು ತಿಳಿದುಕೊಂಡ ಘಟನೆ, ವಿಷಯ, ವಸ್ತುಗಳಿಗೆ ತಮ್ಮ ಕಲ್ಪನೆಯ ಬಲದಿಂದ ಹೊಸ ರೂಪ ಕೊಟ್ಟು ಕವಿತೆಗಳನ್ನು ಸೃಷ್ಟಿಸಿದರು. ಜಿಡಿ ಕವಿತೆಗಳ ವಸ್ತು ಭಾಷೆಗಳ ಹಂಗಿಲ್ಲ.

"ತುಳು ಜನಪದ ಗೀತೆಗಳಲ್ಲಿ ಅನೇಕ ಜಿಡಿ ಹಾಡುಗಳು ಸಿಗುತ್ತವೆ. ಲಘು ಹಾಸ್ಯ ಪ್ರಧಾನವಾಗಿರುವ ಇಂತಹ ಜನಪದ ಹಾಡುಗಳಲ್ಲಿ ಮೀನನ್ನು ಕುರಿತವು ಕೆಲವು ಇವೆ. ವಿಶಾಲವಾದ ಸಮುದ್ರದ ಕರಾವಳಿ ಇರುವ ತುಳುನಾಡಿನಲ್ಲಿ ಮೀನುಗಾರಿಕೆ ಒಂದು ಪ್ರಧಾನ ಕಸುಬು. ಆದ್ದರಿಂದಲೇ ಮೀನನ್ನು ಕುರಿತ ತುಳು ಹಾಡುಗಳು ಇಲ್ಲಿನ ಸಂಸ್ಕೃತಿಯ ನೈಜ ರೂಪ ಒಂದನ್ನು ತಿಳಿಸುತ್ತವೆ. ಅಂತಹ ಕೆಲವು ಹಾಡುಗಳನ್ನು ಇಲ್ಲಿ ಅಧ್ಯಯನ ಮಾಡಬಹುದು.

**ಮೀನಿನ ದಿಬ್ಬಣ**

| | |
|---|---|
| ಬಂಗುಡೆ ಮದಿಮಾಯೆ ಬೂತಾಯಿ ಮದಿಮಾಳೆ | ಬಂಗುಡೆ ಮದುಮಗ ಬೂತಾಯಿಮದುಮಗಳು |
| ದಿಬ್ಬಣೊಡೆ ಪೋನಗ। | ದಿಬ್ಬಣದಲ್ಲಿ ಹೋಗುವಾಗ |
| ನೀರ್‌ಡಿತ್ತಿ ಮೀನೊಳು ಮಾತ ಪಿದಾಡೊಂದುಳ್ಳೆರೆ ॥ | ನೀರೊಳಗಿದ್ದ ಮೀನುಗಳೆಲ್ಲ ಹೊರಡುತ್ತಿದ್ದಾರೆ |
| ಆಹಾ। ಪಿದಾಡೊಂದುಳ್ಳೆರೆ ॥ | ಆಹಾ, ಹೊರಡುತ್ತಿದ್ದಾರೆ |
| ಕೊಂಬು ಕೊಣ್ದು ಪಾರ್ಪೆ ಕೊಂತ್ಯಣ್ಣಿ | ಕೊಂಬು ಹಿಡಿದು ಓಡುತ್ತಾನೆ 'ಕೊಂತಿ' ಅಣ್ಣ |
| ದಿಡುಂಬು ಗುದ್ಪೆ ಮಡೆಂಜಣ್ಣಿ ॥ | ದಿಡುಂಬು ಗುದ್ದುತ್ತಾನೆ 'ಮಡೆಂಜ' ಅಣ್ಣ |
| ಮೀಸೆ ಒಯಿಪುವ ಮುಗುಡಣ್ಣಿ | ಮೀಸೆ ಎಸೆಯುತ್ತಾನೆ 'ಮುಗಡಣ್ಣಾ' |
| ಮುಂಡಾಸೆ ಕಟ್ಟುವೆ ಮೊರಂಟೆ ಅಣ್ಣಿ | ಮಂಡಾಸು ಕಟ್ಟುತ್ತಾನೆ 'ಮೊರಂಟೆ' ಅಣ್ಣಾ |
| ಮುಂಡೊಗು ನಾಮೊ ಪಾಡ್ಪೆ ಕೊಡ್ಯಣಣ್ಣಿ | ಹಣೆಗೆ ನಾಮ ಹಾಕುತ್ತಾ 'ಕೊಡ್ಯಾನ' ಣ್ಣ |
| ಪರಡೊಂದು ಬರ್ಪೆ ಡೆಂಜಣ್ಣಿ॥ | ತೆವಳುತ್ತಾ ಬರುತ್ತಾನೆ 'ಏಡಿ' ಅಣ್ಣಾ |
| ಸೀರೆ ನೆರಿ ಪತ್ಪಳ್ ತೆಬಟೆ ಅಕ್ಕ | ಸೀರೆ ನೆರಿ ಹಿಡಿಯುತ್ತಾಳೆ 'ತೆಬಟೆ' ಅಕ್ಕಾ |
| ಕಣ್ಣಿಗ್ ಮಯಿ ಪಾಡ್ಪಳೆ ಚಂದ್ರಮಡಕ್ಕ ॥ | ಕಣ್ಣಿಗೆ ಕಾಡಿಗೆ ಹಾಕುತ್ತಾಳೆ 'ಚಂದ್ರಮಡ'ಕ್ಕ |
| ತರೆ ಬಾರೆದ್ ಕಟ್ಟಳ್ ಬಾಲೆಕ್ಕ | ತಲೆ ಬಾಚಿ ಕಟ್ಟುತ್ತಾಳೆ 'ಬಾಲೆ' ಅಕ್ಕ |
| ಪೂ ಮುಡಿಪುವಳೆ ಕಿಜಣಕ್ಕ ॥ | ಹೂ ಮುಡಿಸುತ್ತಾಳೆ 'ಕಿಣಜ'ಕ್ಕ |
| ಕುಟ್ಟೊಂದು ಬರ್ಪಳೆ ಎಟ್ಯಕ್ಕ | ಕುಟ್ಟಿಕೊಂಡು ಬರುತ್ತಾಳೆ 'ಸಿಗಡಿ' ಅಕ್ಕ |
| ಲಾಗ್ಯೊಂದು ಬರ್ಪ್ಪಳೆ ಕೈಪೆ ಅಕ್ಕ ॥ | ನೆಗೆದುಕೊಂಡು ಬರುತ್ತಾಳೆ 'ಕೈಪೆ' ಅಕ್ಕ |

ಮೀನಿನ ದಿಬ್ಬಣ ಎಂಬ ಮೇಲಿನ ಹಾಡಿಗೆ ಕೆಲವು ಪಾಠಾಂತರ ಕೂಡಾ ಇದೆ. ಒಂದು ಪಾಠಾಂತರದ ಪ್ರಕಾರ ಆರಂಭದ ಸಾಲುಗಳು ಹೀಗೆ ಇವೆ:

ಬಂಗುಡೆ ಮದಿಮಾಯೆ ಬೂತಾಯಿ ಮದಿಮಾಳ್

ದಿಬ್ಬಣ ಪೋನಾಗ

ನೀರಿಡಿತ್ತಿ ಮೀನೆಳಂ ಮಾತಾ ಮಸ್ಕಿರಿ ಮಲ್ತೆರ್‌ಗೆ

ಆಹಾ. ಮಸ್ಕಿರಿ ಮಲ್ತೆರ್‌ಗೆ

(ಬಂಗುಡೆ ಮದುಮಗ ಮದುಮಗಳು

ದಿಬ್ಬಣ ಹೋಗುವಾಗ

ನೀರಲ್ಲಿದ್ದ ಮೀನುಗಳೆಲ್ಲ

ಗೇಲಿ ಮಾಡಿದವು

ಆಹಾ, ಗೇಲಿ ಮಾಡಿದವು)

ಮೇಲಿನ ಹಾಡುಗಳಲ್ಲಿ 'ಬಂಗುಡೆ' ಮತ್ತು 'ಬೂತಾಯಿ' ಎನ್ನುವ ಎರಡು ಮೀನುಗಳ ದಿಬ್ಬಣವನ್ನು ವರ್ಣಿಸಲಾಗಿದೆ. ತುಳುನಾಡಿನ ಬೇರೆ ಬೇರೆ ಮೀನುಗಳ ಹೆಸರುಗಳನ್ನು ಇಲ್ಲಿ ನೋಡಬಹುದು. ಬಂಗುಡೆ, ಬೂತಾಯಿ, ಕೊಂತಿ, ಮಡೆಂಜಿ, ಮುಗುಡು, ಮೊರಂಟೆ, ಕೊಡ್ಯಾನ್, ಡೆಂಜಿ, ತೆಬಟೆ, ಚಂದ್ರಮಡ, ಬಾಲೆ, ಕಿಜನ್, ಎಟ್ಟಿ, ಕೈಪೆ– ಇವು ಇಲ್ಲಿ ಕಾಣಿಸುವ ಬೇರೆ ಬೇರೆ ಮೀನುಗಳು. ಇವುಗಳಲ್ಲಿ ಕೆಲವು ಕೆರೆಗಳ ಮೀನುಗಳು ಬಂಗುಡೆ ಮತ್ತು ಬೂತಾಯಿ– ಕಡಲಿನಲ್ಲಿ ಸಿಗುವ ಮೀನುಗಳು 'ಬಂಗುಡೆ ಗಾತ್ರದಲ್ಲಿ ದೊಡ್ಡದು. ಆದ್ದರಿಂದ ಅದು ಮದುಮಗ. 'ಬೂತಾಯಿ' ಗಾತ್ರದಲ್ಲಿ ಚಿಕ್ಕದು. ಆದ್ದರಿಂದ ಅದು ಮದುಮಗಳು. ಇವುಗಳ ಮದುವೆಯ ದಿಬ್ಬಣದಲ್ಲಿ ಭಾಗವಹಿಸುವ ಬೇರೆ ಬೇರೆ ಮೀನುಗಳು ಅವುಗಳ ವಿಶಿಷ್ಟ ಗುಣಗಳಿಂದ ಪ್ರಸಿದ್ಧವಾಗಿದೆ. ಆ ಮೀನುಗಳ ವಿಶಿಷ್ಟತೆಯನ್ನು ಆಧರಿಸಿ, ಮದುವೆಯ ದಿಬ್ಬಣದಲ್ಲಿ ಅವುಗಳ ಪಾತ್ರವನ್ನು ಹೇಳಲಾಗಿದೆ. 'ಕೊಂತಿ ಮೀನು' ಸಪೂರವಾಗಿ ಉದ್ದವಾದ ಮೀನು. ನೀರಿನಲ್ಲಿ ಅದು ಈಜಾಡುವಾಗ ಕೊಂಬು ವಾದ್ಯವನ್ನು ಊದುವ ವ್ಯಕ್ತಿಯಂತೆ ಕಾಣಿಸುತ್ತದೆ. ಆದ್ದರಿಂದಲೇ ಕೊಂತಿ ಮೀನು ಕೊಂಬು ಹಿಡಿದುಕೊಂಡು ಓಡುತ್ತದೆ ಎಂದು ವರ್ಣಿಸಲಾಗಿದೆ. 'ದಿಡುಬು' ಎನ್ನುವುದು ಬಾರಿಸುವ(ಹೊಡೆಯುವ) ಒಂದು ಚರ್ಮವಾದ್ಯ. 'ಮಡೆಂಜಿ' ಮೀನಿನ ಉಬ್ಬು ಗಾತ್ರವನ್ನು ಗಮನಿಸಿ 'ಅದು ದಿಡುಂಬು' ವಾದ್ಯವನ್ನು ಹೊಡೆಯುತ್ತದೆ ಎಂದು ನಿರೂಪಿಸಲಾಗಿದೆ. ಮುಗುಡು ಮೀನಿಗೆ ಉದ್ದವಾದ ಮೀಸೆಗಳಿರುವುದರಿಂದ ಅದು ಮೀಸೆಯನ್ನು ಎಳೆಯುವ ಹಾಗೆ ಹೇಳಿದೆ. ಮೊರಂಟೆ ಮೀನಿನ ತಲೆ, ಗಾತ್ರದಲ್ಲಿ ದೊಡ್ಡದಾಗಿದ್ದು ಮುಂಡಾಸು ಕಟ್ಟಿದಂತೆ ಕಾಣಿಸುತ್ತದೆ. ಅದಕ್ಕಾಗಿಯೇ 'ಮೊರಂಟೆ ಮುಂಡಾಸು ಕಟ್ಟಿದ್ದಾನೆ' ಎನ್ನುವ ಮಾತು ಬರುತ್ತದೆ. 'ಕೊಡ್ಯಾನ್' ಮೀನಿಗೆ ಹಣೆಯಲ್ಲಿ ನಾಮದಂತಹ ರಚನೆ ಇದೆ. ಏಡಿ(ಡೆಂಜಿ) ತನ್ನ ಕಾಲುಗಳ ಮೂಲಕ ತೆವಳುತ್ತಾ ತೆವಳುತ್ತಾ ಬರುತ್ತದೆ. ಈ ವಿವರಣೆಯನ್ನು ಹಾಡಿನಲ್ಲಿ ನೋಡಬಹುದು. ಮುಂದೆ ಕಾಣಿಸುವ ಕೆಲವು ಮೀನುಗಳನ್ನು ಹೆಣ್ಣುಗಳು ಎಂದು ವಿವರಿಸಲಾಗಿದೆ. ವೈಜ್ಞಾನಿಕವಾಗಿ ಏನೇ ಇರಲಿ ಜನಪದ

ಸಂಪ್ರದಾಯದಲ್ಲಿ ಈ ಮೀನುಗಳನ್ನು ತೆಬಟೆ, ಚಂದ್ರಮಡೆ, ಬಾಲೆ, ಕಿಜನ್, ಎಟ್ಟಿ, ಕೈಪೆ ಮೀನುಗಳು ಎನ್ನುವುದು ವಾಡಿಕೆ. ಬಾಲೆ ಮೀನಂತೂ ಒಂದು ಜನಪದ ಕತೆಯಲ್ಲಿ ಮದುಮಗಳು ಹೆಣ್ಣು ಎನ್ನುವ ಹಾಗೆ ಚಿತ್ರಿತವಾಗಿದೆ. 'ತೆಬಟೆ' ಮೀನಿನ ಮೈ ಮೇಲೆ ಇರುವಾದ ತಳುವಾದ ಪದರುಗಳು ನೆರಿಗೆ ಇರುವ ಸೀರೆಯನ್ನು ಉಟ್ಟಂತೆ ಕಾಣಿಸುತ್ತದೆ. ಚಂದ್ರಮಡೆ ಮೀನಿನ ಕಣ್ಣಿನ ಪಕ್ಕದ ಕಪ್ಪು ಗುರುತು, ಅದು ಕಣ್ಣಿಗೆ ಕಾಡಿಗೆಯನ್ನು ಹಾಕಿದೆ ಎನ್ನುವ ಭಾವನೆಯನ್ನು ಉಂಟುಮಾಡುತ್ತದೆ. ಬಾಲೆ ಮೀನು ತಲೆ ಬಾಚುತ್ತದೆ, ಕಿಜನು ಮೀನು ಹೂ ಮುಡಿಸುತ್ತದೆ ಎನ್ನುವುದು ಹೆಚ್ಚು ಸಹಜವಾಗಿ ಸುಂದರವಾಗಿದೆ. ಸಿಗಡಿ(ಎಟ್ಟಿ) ಮೀನು ಜಿಗಿಯುತ್ತಾ ಬರುವ ದೃಶ್ಯವನ್ನು 'ಕುಟ್ಟೊಂದು ಬರ್‌ಪ್ಪಳೆ' ಎಂದೂ 'ಕೈಪೆ ಮೀನಿನ ನೆಗೆತವನ್ನು 'ಲಾಗ್ಯೊಂದು ಬರೆಪ್ಪಳೆ' ಎಂದೂ ಚಿತ್ತಿಸಲಾಗಿದೆ. ತುಳುನಾಡಿನ ಬೇರೆ ಬೇರೆ ಮೀನುಗಳ ಸ್ವಭಾವ, ಹಾಸ್ಯಮಯ ಪ್ರಸಂಗವೊಂದರ ಮೂಲಕ ಕಾವ್ಯಮಯವಾಗಿ ವರ್ಣಿಸಿರುವುದು ಈ ಹಾಡಿನ ವೈಶಿಷ್ಟ್ಯ."( ಬಿ.ಎ. ವಿವೇಕ ರೈ 1985 ಪುಟ 287-298)

ಮೇಲೆ ಉಲ್ಲೇಖಿಸಿದ ಮೀನುಗಳಲ್ಲಿ ಬಂಗಡೆ ಮತ್ತು ಬೂತಾಯಿ ಎರಡು ಮೀನುಗಳನ್ನು ಹೊರತುಪಡಿಸಿ ಉಳಿದ ಮೀನುಗಳು ಸಿಹಿನೀರಿನಲ್ಲಿ ವಾಸಿಸುವ ಮೀನುಗಳು

'ಕೊಡ್ಯಾಣ ತರು'ವಿನ ಬಗ್ಗೆ ಮತ್ತು ಇತರ ಮೀನಿನ ಬಗ್ಗೆ ಗಾದೆಗಳಲ್ಲಿ ಉಲ್ಲೇಖಿಸಲಾಗಿದೆ. ಉಪ್ಪು ನೀರಿನಲ್ಲಿ ವಾಸಿಸಿ ಮಾರಾಟ ದೃಷ್ಟಿಯಿಂದ ಹಳ್ಳಿಯ ಕಡೆ ಬಂದಾಗ ಅವುಗಳು ಜನಪದರಿಗೆ ಮದುಮಗ ಮದುಮಗಳಾಗಿ ಕಂಡಿದ್ದಾರೆ. ಅದನ್ನು ಸಿಹಿನೀರಿನ ಮೀನುಗಳು ಎದುರುಗೊಳ್ಳುವ ರೀತಿಯನ್ನು ವಿವರಿಸುವುದರ ಜೊತೆಗೆ ಸ್ವೀಕರಾರ್ಹತೆಯನ್ನು ಈ ಬಿಡಿ ಕವಿತೆಗಳಲ್ಲಿ ಕಾಣಬಹುದು.

## 6.3 ಗಾದೆಗಳಲ್ಲಿ ಮೀನಿನ ಉಲ್ಲೇಖ

ಗಾದೆಗಳು ವೇದಕ್ಕೆ ಸಮ. ಗಾದೆ ಮಾತುಗಳೆಂದರೆ ವಿವೇಕ ಜಾಗೃತಿಯನ್ನುಂಟು ಮಾಡುವ ಒಳ್ನುಡಿಗಳು. ಜನರ ಅನುಭವದಿಂದ ಮೂಡಿ ಬಂದ ತತ್ವ ಸಿದ್ಧಾಂತಗಳು. ಅವು ಒಂದು ಬಗೆಯ ವಕ್ರೋಕ್ತಿಗಳು. ಸಂಕ್ಷಿಪತ್ತೆ, ಸೂಚ್ಯಕವಾದ ಧ್ವನಿ, ವಿವೇಕ ಪೂರ್ಣತೆ, ತೀಕ್ಷ್ಣತೆ ಹಾಗೂ ಜನಪ್ರಿಯತೆ ಗಾದೆಗಳ ಮುಖ್ಯ ಲಕ್ಷಣ. ಗಾದೆಯು ಒಂದು ಜನಾಂಗದ ಒಂದು ಭಾಷೆಯ ಜೀವಂತಿಕೆಗೆ ಸಾಕ್ಷಿ. ಗಾದೆ ಅಜ್ಞಾತವಾಗಿ ಹುಟ್ಟಿಕೊಳ್ಳುತ್ತದೆ. ಯಾರೋ ಒಬ್ಬಾತ ತನ್ನ ಅನುಭವದಿಂದ ಗಾದೆಯೊಂದನ್ನು ಸೃಷ್ಟಿಸಿ ಬಿಡುತ್ತಾನೆ. ಗಾದೆ ಉತ್ತಮವಾಗಿದ್ದರೆ ಗಾದೆಯನ್ನು ಮತ್ತೆ ಮತ್ತೆ ಬಳಸುತ್ತಾ ಹೋಗುತ್ತಾರೆ.

ತುಳು ಗಾದೆಗಳು ತುಳುನಾಡಿನ ಸಾಂಸ್ಕೃತಿಕ ಅನನ್ಯತೆಯನ್ನು ಸಾರುವ ಮೌಖಿಕ ಮಾತು. ಕೆಳಗೆ ನಮೂದಿಸಿದ ಗಾದೆಗಳು ಮೀನಿನ ವರ್ತನೆ, ಮೀನಿನ ಆಕಾರ, ಮೀನು ವಾಸಿಸುವ ನೀರಿನ ಪ್ರಮಾಣ, ಮೀನಿನ ರುಚಿ ಜೊತೆಗೆ ತುಳುನಾಡಿನ ಜನರ ವರ್ತನೆಗಳೊಂದಿಗೆ ನಡವಳಿಕೆ, ತಿಳುವಳಿಕೆ ಮತ್ತು

ಇವುಗಳನ್ನು ಅನಾವರಣ ಮಾಡುವಂತವುಗಳು. ಮೀನಿನ ಗುಣ ಸ್ವಭಾವದೊಂದಿಗೆ ಹೋಲಿಕೆ\ತುಲನೆ ಮಾಡುವ ಗಾದೆಗಳನ್ನು ಕಾಣಬಹುದು.

**ತು: ತುಳುಭಾಷೆ ಗಾದೆಗಳು**

**ಕ: ಕನ್ನಡ ಅನುವಾದ**

ತು: ಅರುವತ್ತೆ ತರು ಪತ್ಯೆಂಡ ತಮ್ಮಲೆ ಮೊರಂಟೆ ಪತ್ಯೆ.

ಕ: ಅಳಿಯ ಕಿರು ಮೀನು ಹಿಡಿದರೆ ಮಾವ ಮೊರಂಟೆ ಮೀನು ಹಿಡಿದನು.

ತು: ಈ ಕೈನ್ ಬುಡುದೇನ್ ವಾ ಬೇಲೆಲಾ ಬೆಣ್ತಿಜಿಂದ್ ಅಡ್ಕದಾಲ್ ಪ್ರಮಾಣ ಮಲ್ತಿ ಗಾದೆ.

ಕ: ಈ ಕೈಯನ್ನು ಬಿಟ್ಟು ನಾನು ಯಾವ ಕೆಲಸವನ್ನು ಮಾಡಲಿಲ್ಲವೆಂದು ಮೀನು ಮಾರುವವಳು ಪ್ರಮಾಣ ಮಾಡಿದ ಗಾದೆ.

ಮೀನು ಮಾರುವ ಹೆಂಗಸೊಬ್ಬಳು ಮೀನಿನ ಬುಟ್ಟಿಯನ್ನು ಹಿಡಿದುಕೊಂಡು ಗಂಡನಲ್ಲಿ ಹೇಳಿದ ಮೋಸದ ಗಾದೆ.

ತು: ಎಟ್ಟಿಗ್ಲಾ ಮೀಸೆ ಸೆಟ್ಟಿಗ್ಲಾ ಮೀಸೆ

ಕ: ಸಿಗಡಿಗೂ ಮೀಸೆ ಸೆಟ್ಟಿಗೂ ಮೀಸೆ

ತು: ಎಟ್ಟಿ ಪಂಣ್ತಂಡ್ಗೆ ಜನ ಎಲ್ಯೆ ಆಂಡ ದಾನೆ ಮೀಸೆ ಎಲ್ಯೆ ಅತ್ತ್.

ಕ: ಸಿಗಡಿ ಹೇಳಿದೆಯಂತೆ ಜನ ಸಣ್ಣದಾದರೇನು ಮೀಸೆ ಸಣ್ಣದಲ್ಲವೆಂದು.

ತು: ಎಣ್ಣೆ ಕಸೆಂಟ್ಡಲ ಪೋಂಡು , ಮೀನ್ ಕುಮೆಂಡಲ ಪೋಂಡು.

ಕ: ಎಣ್ಣೆ ಕುಮಟಾದರೆ ಹೋಯಿತು ಮೀನು ತೊಳೆದರೆ ಹೋಯಿತು.

ತು: ಏಮೆ ಅಂಚಿ ನೀರ್ಡಲಾ ಬದುಕುಂಡು ಇಂಚಿ ಬೊಟ್ಟುಡ್ಲಾ ಬದುಕುಂಡು.

ಕ: ಆಮೆ ಆಚೆ ನೀರಿನಲ್ಲಿಯೂ ಬದುಕುತ್ತದೆ ಈಚೆ ನೀರಿನಲ್ಲಿಯೂ ಬದುಕುತ್ತದೆ.

ತು: ಏಮೆ ತುಚ್ಚಿನ ಕೋಲುಡ್ದ್ ಬಾಯಿ ಬುಡ್ನ ಲೆಕ ಆಂಡ್.

ಕ: ಆಮೆ ಕಚ್ಚಿದ ಕೋಲಿನಿಂದ ಬಾಯಿ ಬಿಟ್ಟ ಹಾಗಯಿತು.

ತು: ಏಮೆದ ಗಾದೆ ತಾನ್ ಸುತ್ತ ತೂವೊಲಿ ತನನ್ ಏರ್ಲಾ ತೂಯರಾವಂದ್.

ಕ: ಆಮೆದ ಗಾದೆ ನಾನು ಸುತ್ತ ನೋಡಬಹುದು ನನ್ನನ್ನು ಯಾರೂ ನೋಡಬಾರದು.

ತು: ಏಮೆದ ಬೆರಿಟ್ ಅಡಿಯರೆ ಪೋಯಿನಕ್ಲೆ ಗಾದೆ.

ಕ: ಆಮೆಯ ಬೆನ್ನಿನಲ್ಲಿ ಅಡುಗೆ ಮಾಡಲು ಹೋದವರ ಗಾದೆ.

ಆಮೆಯನ್ನು ಕಲ್ಲೆಂದು ಭ್ರಮಿಸಿ ಒಲೆಯನ್ನು ಹೂಡಿ ಅಡುಗೆಗೆ ತೊಡಗಲು, ಬೆಂಕಿಯ ಬಿಸಿಗೆ ಆಮೆ ಚಡಪಡಿಸಿತು. ಆಗ ಅದರ ಬೆನ್ನಿನಲ್ಲಿಟ್ಟ ಪಾತ್ರ ಮಗುಚಿ ಬಿದ್ದು ಅಡುಗೆ ಅಸ್ತವ್ಯಸ್ತವಾಯಿತು.

ತು: ಏಮೆದ ಲೆಕ್ಕ ಮಾಂತಲ ಉಳಯಿಗ್ ಒಯ್ತೊನುನೆ.

ಕ: ಆಮೆಯ ಹಾಗೆ ಎಲ್ಲವನ್ನೂ ಒಳಗೆ ಎಳೆದು ಕೊಳ್ಳುವುದು.

ತು: ಏಮೆನ್ ಬೊದುಲಿಯರೆ ಪಾಡಿ ಗಾದೆ.

ಕ: ಆಮೆಯನ್ನು ನೆನೆಯಲು ಹಾಕಿದ ಗಾದೆ.

ತು: ಏಮೆ ನಿಂಗುನ ಕೇರಿದ ಗಾದೆ.

ಕ: ಆಮೆಯನ್ನು ನುಂಗುವ ಕೇರೆಯ ಗಾದೆ

– ಸಂದಿಗ್ದತೆ, ಸಂಕಟ

ತು: ಏಮೆ ಮಲಂಕನೆ ಆಂಡ ಪೋಂಡು, ತಡ್ಪೆ ಕಂಕಣೆ ಆಂಡ ಪೋಂಡು.

ಕ: ಆಮೆ ಅಂಗಾತ ಆದರೆ ಹೋಯಿತು ಗೆರಸೆ ಬೋರಲಾದರೆ ಹೋಯಿತು.

ತು: ಏರಿ ತಿಂದಿ ರುಚಿಕ್ ಬೋರಿ ಮಾರ್ದಿಗೆ.

ಕ: ಏರಿ ತಿಂದ ರುಚಿಗೆ (ಮಾರು ಹೋಗಿ) ಹೋರಿಯನ್ನು ಮಾರಿದನಂತೆ.

ಬಾಯಿ ಚಾಪಲ್ಯಕ್ಕೆ ಸೋತು ಸೊತ್ತನ್ನು ಕಳೆದುಕೊಳ್ಳುವುದು.

ಏರಿ ರುಚಿಯಾದ ಮೃದುವಾದ ಮಾಂಸದ ಮೀನು.

ತು: ಏರೆ ಸಂಗಲಾ ಮಲ್ಪೊಲಿ ಮೀನ್ ಮಾರುನಾಳೆ ಸಂಗ ಸಲ್ಲ.

ಕ: ಯಾರ ಸಂಗವನ್ನೂ ಮಾಡಬಹುದು ಮೀನು ಮಾರುವವಳ ಸಂಗ ಸಲ್ಲದು

ಮೀನಿನ ವಾಸನೆ ಮೈಗೆ ಹತ್ತಿ ಕೊಳ್ಳುತ್ತದೆ.

ತು: ಓಟೆದ ಪುರಳ್ಗ್ ನಾದೊ ಬರು. ಮೀನ್ದ ಪುರಳ್ಗ್ ನಾತೊ ಬರು.

ಕ: ಬಿದಿರಿನ ಕೊಳಲಿನಲ್ಲಿ ನಾದ ಬಂದೀತು ಮೀನಿನ ಹೊಲಸಿನಲ್ಲಿ ವಾಸನೆ ಬಂದೀತು.

ತು: ಕಡೋ ಇತ್ತಿ ನರಮಾನಿ ಕಡುಕೊಂಡಿ ಮೀನ್ದಲೆಕೊಗೆ.

ಕ: ಸಾಲ ಪಡೆದ ಮನುಷ್ಯ ವಿಷ ತಿಂದ ಮೀನಿನಂತೆ.

ತು: ಕಳಂಕಿ ನೀರ್ಗ್ ಬಲೆ ಪಾಡೊನೊಡು.

ಕ: ಕದಡಿದ ನೀರಿಗೆ ಬಲೆ ಹಾಕಬೇಕು

ಪರಿಸ್ಥಿತಿಯನ್ನು ಅನುಕೂಲಕ್ಕೆ ಬಳಸಿಕೊಳ್ಳುವಿಕೆ

ಕದಡಿದ ನೀರಿನಲ್ಲಿ ಮೀನಿನ ಕಣ್ಣು ಮಸುಕುತ್ತದೆ.

ತು: ಕುಡೆಕ ಪಾಡಿನ ಕೈಲಾ ಇಜ್ಜಿ ಕಲಂಬುರುಲಾ ಇಜ್ಜಿ.

ಕ: (ನೀರಿನೊಳಗಿನ) ಬಿಲಕ್ಕೆ ಹಾಕಿದ ಕೈಯೂ ಇಲ್ಲ ಕಲುಬುರು ಕೂಡ ಇಲ್ಲ.

ಇಕ್ಕಟ್ಟಿನಲ್ಲಿ ಸಿಲುಕಿಕೊಂಡು ನಷ್ಟವಾಗುವುದು

ತು: ಕೆರೆ ಉಣುಂಗ್‌ಡ್ ಮೀನ್ ಸೈತ್‌ಂಡ್

ಕ: ಕೆರೆ ಒಣಗಿತು ಮೀನು ಸತ್ತಿತು

ಆಶ್ರಯ ತಪ್ಪಿದಾಗ ಆಗುವ ಅನಾಹುತ.

ತು: ಕೊಡ್ಯಣ ತರುಕ್ಕು ನೆಗತ್ತ ದೇ ಉಪ್ಪೊಡುಗೆ

ಕ: ಕೊಡ್ಯಣ ಮೀನಿಗೆ ತೆಲುತಲೇ ಇರಬೇಕಂತೆ

ಕೊಡ್ಯಣ ಎಂಬ ಕಿರು ಮೀನು ಹೆಚ್ಚಾಗಿ ನೀರಿನ ಮೇಲುಪದರದಲ್ಲಿ ತೇಲುತಿರುತ್ತದೆ –ಸದಾ ತೋರಿಸಿಕೊಳ್ಳುವ ಪ್ರವೃತ್ತಿ

ತು: ಗಾಳೊಡು ಪತ್ತಿ ಮೀನ್ ನ್ ಗಾಳೊಡೇ ಬಚ್ಚಾವೊಡು.

ಕ: ಗಾಳದಲ್ಲಿ ಹಿಡಿದ ಮೀನನ್ನು ಗಾಳದಲ್ಲಿಯೇ ಬಳಳಿಸಬೇಕು.

ತು: ಗಾಳ ನಿಂಗ್ನ ಮೀನ್ ಗ್ ಮರಣ

ಕ: ಗಾಳ ನುಂಗಿದ ಮೀನಿಗೆ ಮರಣ.

ತು: ಚಾಪೆದ ಮೀನ್ಲಾ ಕುಂಬಾಪುಂಡು.

ಕ: ದಾಸ್ತಾನು ಮನೆಯ ಮೀನು ಲಡ್ಡಾಗುತ್ತದೆ.

ಚಾಪೆ= ಉಪ್ಪು ಹಾಕಿ ಒಣಗಿಸಿದ ಮೀನನ್ನು ದಾಸ್ತಾನು ಮಾಡುವ ಮನೆ.

ತು: ಡೆಂಜಿಡ್ ನಂಜಿಜ್ಜಿ ಬಂಜಿಡ್ ಕೂಳಿಜ್ಜಿ

ಕ: ಏಡಿಯಲ್ಲಿ ನಂಜು ಇಲ್ಲ ಹೊಟ್ಟೆಯಲ್ಲಿ ಹಲ್ಲಿಲ್ಲ

ಏಡಿಯನ್ನು ತಿನ್ನುವುದರಿಂದ ದೇಹದಲ್ಲಿ ನಂಜು ಉಂಟಾಗುವುದಿಲ್ಲ ಎನ್ನಲಾಗಿದೆ.

ತು: ಡೆಂಜಿದ ಕಾರ್ ಡೆಂಜಿದ ತಿಗಲೆಡ್

ಕ: ಏಡಿಯ ಕಾಲು ಏಡಿಯ ಎದೆಗೆ

ಏಡಿ ಕಚ್ಚದಂತೆ ಅದರ ಕಾಲಿನ ಮುಳ್ಳನ್ನೇ ಅದರ ಎದೆಗೆ ಚುಚುತ್ತದೆ.

ತು: ಡೆಂಜಿದ ಕೆಲಸ ಕುಡೆ ತೋಡುನ.

ಕ: ಏಡಿಯ ಕೆಲಸ ಬಿಲ ತೋಡುವುದು.

ತು. ಡೆಂಜಿದ ಲೆಕ್ಕೊ ಬೆನ್ಪುನ ಕಾರೊಂಜಿ ತಿನ್ಪುನ ಕಾರೊಂಜಿ.

ಕ: ಏಡಿಯಂತೆ ದುಡಿಯುವ ಕಾಲೊಂದು ತಿನ್ನುವ ಕಾಲೊಂದು

ದುಡಿಯುವವ ಒಬ್ಬ ತಿನ್ನುವವ ಇನ್ನೊಬ್ಬ.

ತು: ಡೆಂಜಿದ ಲೆಕ ತೂಪುನ ಒಂಜಿ ದಿಕ್ಕ್ ಪೋಪುನ ನನೊಂಜಿ ದಿಕ್ಕ್‌ಗ್

ಕ: ಏಡಿಯ ಹಾಗೆ ನೋಡುವುದು ಒಂದು ಕಡೆಗೆ ಹೋಗುವುದು ಇನ್ನೊಂದು ಕಡೆಗೆ.

ತು: ಡೆಂಜಿನ್ ದೆತ್ತ್‌ದ್ ಪುಣಿ ಪೂಜೊಡು.

ಕ: ಏಡಿಯನ್ನು ಹೊರ ತೆಗೆದು ಗದ್ದೆಯನ್ನು ಸವರಬೇಕು.

ಗದ್ದೆಯ ಅಂಚು ಅಥವಾ ಹುಣಿಯನ್ನು ಏಡಿಯು ಕೊರೆದು ಹಾಳು ಮಾಡುತ್ತದೆ.

ತು: ಡೆಂಜಿ ಪತ್ತುನ ಗೌಜಿಡ್ ಕಟ್ಟ ಕಡಿನ ಗೊಂತೇ ಇಜ್ಜಿ.

ಕ: ಏಡಿ ಹಿಡಿಯುವ ಸಡಗರದಲ್ಲಿ ನೀರ ಅಣೆಕಟ್ಟು ಕಡಿದ್ದು ತಿಳಿಯಲೇ ಇಲ್ಲ.

ತು: ಡೆಂಜಿಲ ಇಜ್ಜಿ ಡೆಂಜಿಗ ಪಾಡಿನ ಕೈಲ ಇಜ್ಜಿ.

ಕ: ಏಡಿಯೂ ಇಲ್ಲ ಏಡಿಗೆ ಹಾಕಿದ ಕೈಯೂ ಇಲ್ಲ.

ತು: ತೌತೆಗ್ ಕುದ್ಕೆ ಕಾವೆಲ್ ಮೀನುಗು ಪುಚ್ಚೆ ಕಾವೆಲ್.

ಕ: ಸೌತೆಗೆ ನರಿ ಕಾವಲು, ಮೀನಿಗೆ ಬೆಕ್ಕು ಕಾವಲು.

ಕಳ್ಳರನ್ನು ಕಾವಲುತನಕ್ಕೆ ನೇಮಿಸುವುದು.

ತು: ದೊಡ್ಡವುದಡ್ಯೆಗ್ ಬಡ್ಡ್ ಕುರ್ಚಿದ ರೇಸೊ ಇತ್ತಿಲೆಕ್ಕಾಂಡ್.

ಕ: ಅಕ್ಕಿ ರೊಟ್ಟಿಗೆ ಬಡ್ಡು ಕುರ್ಚಿ ಮೀನಿನ ಸಾರು ಇದ್ದ ಹಾಗಾಯಿತು. (ಅನುಕೂಲ ಸೊಬಂಧ).

ತು: ನಕ್ರುದೊಟ್ಟುಗು ಗಾಳೊಲ ನಿಂಗುನೆ

ಕ: ಎರೆ ಹುಳುವಿನೊಟ್ಟಿಗೆ ಗಾಳವನ್ನೂ ನುಂಗುವುದು.

ತು: ನಂಗ್ ಮೀನ್ ಪುಡಿಕ್ಕೆನೆ ಆಯರುಂದುಂಡೊ.

ಕ: ನಂಗು ಮೀನು ಪುಷ್ಟಿ ಆಗುವುದುಂಟೇ?

ನಂಗು ಚಪ್ಪಟೆಯಾಕಾರದ ಮೀನು.

ತು: ನೀರ್ಡ್ ದೆತ್ತ್ನ ಮೀನ್ದ ಲೆಕ

ಕ: ನೀರಿನಿಂದ ತೆಗೆದ ಮೀನಿನಂತೆ.

ತು: ನೀರ್ ಕಳಂಕ್ಂಡ ಗಾಳ ಪಾಡೆರೆ ಎಡ್ಡೆ.

ಕ: ನೀರು ಕದಡಿದರೆ ಗಾಳ ಹಾಕಲು ಒಳಿತು.

ಪರಿಸ್ಥಿತಿಯ ಲಾಭ ಪಡೆಯುವ ಪ್ರಯತ್ನ.

ತು: ಕಂಟೆಲ್ದ ಗಾಳನ್ ನಿಂಗ್ಯರಲ ಅತ್ತ್ ಉಬಿಯರೆಲ ಅತ್ತ್

ಕ: ಗಂಟಲಿನ ಗಾಳವನ್ನು ನುಂಗಲೂ ಅಲ್ಲ ಉಗುಳಲೂ ಅಲ್ಲ.

ತು: ನೀರ್ ಆಜಾಯಿನ ಕೆರೆತ ನೀರ್ ಪತ್ತೆರ ಬಲೆ ಬೊಡ್ಚಿ.

ಕ: ನೀರು ಆರಿದ ಕೆರೆಯ ಮೀನು ಹಿಡಿಯಲು ಬಲೆ ಬೇಕಾಗಿಲ್ಲ.

ತು: ನೀರ ಆಜಿನ ಕೆರೆಟ್ ಕೋರ ಬಲೆ ಪತ್ತಿ ಲೆಕ್ಕ.

ಕ: ನೀರು ಆರಿದ ಕೆರೆಯಲ್ಲಿ ಗೋರು ಬಲೆ ಎಳೆದಂತೆ.

ಏಕ ಕಾಲದಲ್ಲಿ ಹೆಚ್ಚು ಸಂಪಾದನೆ.

ತು: ಪಾಚೆಲ ತರು ಏತ್ ಪುಡಿಕೆನೆ ಆವು.

ಕ: ಪಾಚೆಲ ಮೀನು ಎಷ್ಟು ಪುಷ್ಟಿ ಆದೀತು.

ಬೆಳವಣಿಗೆ ಇಲ್ಲದ ಸಣ್ಣ ಜಾತಿಯ ಮೀನು

ತು: ಪುಚ್ಚೆ ಮಿಯಾವು ಪಣ್ಂಬು ನಾಯಿ ಬಕ್ಕ್ ಬಕ್ಕ್ ಪಣ್ಂಬು.

ಕ: ಬೆಕ್ಕು ಮಿಯಾವು ಎಂದಿತು ನಾಯಿ ಬಕ್ ಬಕ್ ಎಂದಿತು.

ಪ್ರಾಣಿನ ಕೂಗಿನ ಶಬ್ದಗಳನ್ನು ಗಾದೆಗೆ ಬಳಸಲಾಗಿದೆ.

ತು: ಪೂತಾಳೆಗ್ ಪೂ ಪರಿಮಳ ಮೀನ್ದಾಳೆಗ್ ಮೀನ್ ಪರಿಮಳ

ಕ : ಹೂವಿನವಳಿಗೆ ಹೂ ಪರಿಮಳ ಮೀನಿನವಳಿಗೆ ಮೀನು ಪರಿಮಳ.

ತು: ಬಲೆಡ್ದ್ ರಟ್ಟಿ ಮೀನ್ ಬಲೆಕ್ಕ್ ಬೂರಿಲೆಕ್ಕಾಂಡ್.

ಕ: ಬಲೆಯಿಂದ ನೆಗೆದ ಮೀನು ಬಲೆಗೆ ಬಿದ್ದ ಹಾಗಾಯಿತು.

ತು: ಬಳ್ಟಟ್ಟ್ ರೇಸೊ ಬೇಗೊ ಒಯ್ಪುಂದ್.

ಕ: ಬಳ್ಟಟ್ಟು ಮೀನು (ಪಲ್ಯ) ರಸ ಬೇಗ ಎಳೆದುಕೊಳ್ಳದು.

(ಬಳ್ಬಟ್ಟು ಎಂಬುದು ಚಪ್ಪಟೆಯಾಕಾರದ ಚಪ್ಪೆ ರುಚಿಯ ಮೀನು.)

ತು: ಮಕ್ಕ್ ಪುಟ್ಟೊಡು ಕೆಯಿಕ್ ಸುನೆ ಪುಟ್ಟೊಡು ಕಡುಕು

ಕ: ಚಂಗು ಹುಟ್ಟಬೇಕು ಬತ್ತದ ಪೈರಿಗೆ ಸೊನೆ ಹುಟ್ಟಬೇಕು ಕಡು ಹಾಕುವ ಗಿಡಕ್ಕೆ.

ಕೆಲವು ವಿಷಕಾರಿ ಸಸ್ಯಗಳ ರಸವನ್ನು ಕದಡಿ ನೀರಲ್ಲಿ ಮೀನು ಹಿಡಿಯುವ ವಾಡಿಕೆ ಇದೆ ಇದಕ್ಕೆ ಕಡು (ವಿಷ) ಹಾಕುವುದು ಎನ್ನುತ್ತಾರೆ.

ತು: ಮಕ್ಕೆರಿಗ್ ತಿಕ್ಕುಜಿ ಕೂರಿಗ್ ಪೊಗ್ಗುಜಿ.

ಕ: ಮಕ್ಕರಿಗೆ ಸಿಗುವುದಿಲ್ಲ ಕೂರಿಗೆ ಹೋಗುವುದಿಲ್ಲ.

ತು: ಮಡೆಂಜಿ ಪೋಯಿನೌಲೆ ಕಳಂಕ್ ತಪ್ಪುಂದ್.

ಕ: ಮಡೆಂಜಿ ಮೀನು ಹೊದಲ್ಲಿ ಕಳಂಕ ತಪ್ಪುವುದಿಲ್ಲ.

ವಿನಾ: ಕಾರಣ ತೊಂದರೆ ಕೊಡುವವರು.

ತು: ಮಾತ ಮೀನ್ ಉರ್ಜುನ ನಂಗ್ ಮೀನ್ದ ಮಿತ್ತ್‌ಗೆ.

ಕ: ಎಲ್ಲಾ ಮೀನು ಹೇಲುವುದು ನಂಗು ಮೀನಿನ ಮೇಲಂತೆ.

(ನಂಗು ಎಂಬುದು ಚಪ್ಪಟೆಯಾಕಾರದ ದಡ್ಡತನಕ್ಕೆ ಪ್ರತಿಕವಾದ ಒಂದು ಜಾತಿಯ ಮೀನು)

ತು: ಮಾರಿ ಬಲೆಕ್ಕ್ ಬೂರಂದ್‌ನವಿಜ್ಜಿ.

ಕ: ಮಾರಿ ಬಲೆಗೆ ಬಿಳದವು ಯಾವೂದೂ ಇಲ್ಲ.

ಕ: ಮಾರಿ ಬಲೆ ಎಂಬು ದೊಡ್ಡ ಬಲೆಗೆ ಬೀಳದ ಮೀನುಗಳಿಲ್ಲ.

ಕ: ವಿಧಿಯ ಮಹಾಜಾಲಕ್ಕೆ ಒಳಗಾಗದವರಿಲ್ಲ.

ತು: ಮೀನ್ದ ಪರಿಮಳ ಬರಂದೆ ಅಡ್ಕದಳೆಗ್ ನಿದ್ರೆ ಬತ್‌ಜಿಗೆ.

ಕ: ಮೀನಿನ ಪರಿಮಳ ಬಾರದೆ ಮೀನಿನವಳಿಗೆ ನಿದ್ದೆ ಬರಲಿಲ್ಲವಂತೆ.

ತು: ಮುಗುಡುಗು ಪೋಡಿತ್‌ಂಡ ಅತ ಮಗೆ ಮೊರಂಟೆಗ್ ಪೋಡಿಯುನ .

ಕ: ಮುಗುಡು ಮೀನಿಗೆ ಹೆದರಿದರಲ್ಲವೆ ಮಗ ಮೊರಂಟೆ ಮೀನಿಗೆ ಹೆದರುವುದು.

ದೊಡ್ಡ ವಿಷಯಕ್ಕೆ ಅಂಜದವನು ಚಿಕ್ಕ ವಷಯಕ್ಕೆ ಅಂಜಲಾರ.

ಮುಗುಡು ಮೀನು ಮೊರಂಟೆಗಿಂತ ದೊಡ್ಡದಾದ ಮತ್ತು ಮುಳ್ಳುಗಳಿರುವ ಮೀನು.

ತು: ಮೆಲ್ಲ ತಿಂದ್0ಡ ಮುಲ್ಲುಲ ತಿನೊಲಿ.

ಕ: ನಿಧಾನ ತಿಂದರೆ ಮುಳ್ಳನ್ನೂ ತಿನ್ನಬಹುದು.

ತು: ಮೊರಂಟೆಗ್ ಮೀಸೆ ಇಜ್ಜ.

ಕ: ಮೊರಂಟೆ ಮೀನಿಗೆ ಮೀಸೆ ಇಲ್ಲ.

(ಸಿಹಿನೀರಿನಲ್ಲಿರುವ ಒಂದು ಜಾತಿ ಮೀನು)

ತು: ಮೊರಂಟೆದ ಲೆಕ್ಕ ರಟ್ಪ್‌ಬೆ.

ಕ: ಮೊರಂಟೆದ ಹಾಗೆ ಹಾರುತ್ತಾನೆ.

ತು: ರಟ್ಟುನೆಟ್ ಎಟ್ಟಿ ಬಲೊ.

ಕ: ಜಿಗಿಯುವುದರಲ್ಲಿ ಸಿಗಡಿ ಮಿಗಿಲು.

ತು: ಲಳ್ಳಿದ ಕೊಂಬಕಾರ್ ಲಳ್ಳಿಗೇ ಮಾಟೊ.

ಕ: ಏಡಿಯ ಕೊಂಬಕಾಲು ಏಡಿಗೇ ಮಾಟ.

ತು: ಸೂಟೆದ ಮೀನ್‌ಗ್ ಭಾರೀ ರಿಚಿಗೆ.

ಕ: ಸೂಟೆ ಮೀನಿಗೆ ಭಾರೀ ರುಚಿಯಂತೆ.

ರಾತ್ರಿಯ ವೇಳೆ ಪಂಜು ಹೊತ್ತಿಸಿಕೊಂಡು ಹೊಳೆಯ ನೀರಿನಲ್ಲಿ ನಡೆಯುವಾಗ ಪಂಜಿನ ಬೆಳಕಿಗೆ ಮೀನುಗಳು ಮೇಲೆ ಬರುತ್ತದೆ. ಆಗ ಅವುಗಳನ್ನು ಕತ್ತಿಯಿಂದ ಕಡಿದು ಕೊಲ್ಲುತ್ತಾರೆ. ಇಂತಹ ಬೇಟೆಯ ಮೀನು ರುಚಿಕರವೆಂದು ಪ್ರತೀತಿ.

ತು: ಸೈಪಿ ಕಾಲೊಗು ಮಾಳಪ್ಪಯ್ಯೆ ಮೀನ್ ತಿಂದ್ರಿಯೆಗೆ

ಕ: ಸಾಯುವ ಕಾಲಕ್ಕೆ ಮಾಳಪ್ಪಯ್ಯ ಮೀನು ತಿಂದು ಬಿಟ್ಟನಂತೆ.

ಜೀವವಿರುವಷ್ಟು ಕಾಲ ಮಡುವಂತಿಕೆಯಿಂದ ಆಸೆಗಳನ್ನು ತಡೆದುಕೊಂಡು ಕೊನೆಯ ಗಳಿಗೆಯಲ್ಲಿ ಮತ ಕೆಡಿಸಿಕೊಂಡವನ ಹಾಗೆ.

ತು: ಹಂಗ್ ಬೆಂಗ್‌ದ ಸಮ್ಮಾನೊಡ್ದು ನಂಗ್ ಚಟ್ಣಿದ ತಂಞಣೊ ಎಡ್ಡೆಗೆ.

ಕ: ಹಂಗಿನ ಔತಣದ ಊಟಕ್ಕಿಂತ ನಂಗು ಮೀನಿನ ಚಟ್ನಿಯ ಜೊತೆಗಿನ ತಂಗಳನ್ನ ಲೇಸು.

## ಅಧ್ಯಾಯ –7

# ಸಮಾಪನ:

ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆ ಜಾನಪದೀಯ ಅಧ್ಯಯನ ಎಂಬ ವಿಷಯದಲ್ಲಿ ಒಟ್ಟು 6 ಅಧ್ಯಾಯದಲ್ಲಿ ವಿವಿಧ ರೀತಿಯ/ಮಾದರಿಯ ಮೀನು ಬೇಟೆಗಾರಿಕೆ ಅಧ್ಯಯನವನ್ನು ತಲಸ್ಪರ್ಶಿಯಾಗಿ ಮಾಡಲಾಗಿದೆ. ತುಳು ಜಾನಪದದಲ್ಲಿ ಈ ರೀತಿಯ ಅಧ್ಯಯನ ಈವರೆಗೆ ನಡೆದಿಲ್ಲ. ಅಧ್ಯಾಯ ಒಂದರಲ್ಲಿ ಪ್ರಸ್ತಾವನೆ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಅಧ್ಯಯನದ ಸ್ವರೂಪ ಮತ್ತು ಈವರೆಗೆ ಒಟ್ಟು ಬೇಟೆಗಾರಿಕೆಯ ಕುರಿತಂತೆ ನಡೆಸಿರುವ ಅಧ್ಯಯನದ ಅವಲೋಕನ ಮಾಡಲಾಗಿದೆ. ಅಧ್ಯಾಯ ಎರಡರಲ್ಲಿ ಗಾಳ ಹಾಕಿ ಮೀನು ಹಿಡಿಯುವ ವಿಧಾನವನ್ನು ವಿವರಿಸಲಾಗಿದೆ. ಈ ಅಧ್ಯಾಯದಲ್ಲಿ ಮೊರಂಟೆ ಮೀನು ಗಾಳ, ನೊಲಿ/ಪುರಿಯೋಲು ಮೀನುಗಾಳ, ಮಡಂಜಿ/ಗಂಡೆ ಮೀನುಗಾಳ, ಕೊಂಬೆಟ್ಟಿ ಗಾಳ ಇತ್ಯಾದಿ. ಇದರ ಬೇಟೆಗಾರಿಕೆ ವಿಧಾನ ಸಂದರ್ಭ ಗಾಳದ ಗಾತ್ರ ಬಳಸುವ ಆಹಾರ ಇತ್ಯಾದಿ ವಿವರಗಳನ್ನು 2ನೇ ಅಧ್ಯಾಯದಲ್ಲಿ ವಿವರಿಸಿಕೊಳ್ಳಲಾಗಿದೆ.

ಅಧ್ಯಾಯ ಮೂರು ಕಡು ಹಾಕುವ ವಿಧಾನ: ಅಥವಾ ನೀರಿಗೆ ವಿಷ ಬೆರೆಸುವ ವಿಧಾನ ಇದರಲ್ಲಿ ಎರಡು ವಿಭಾಗ ಮಾಡಲಾಗಿದೆ. ಪಾರಂಪರಿಕೆ ವಿಧಾನ ಮತ್ತು ಆಧುನಿಕ ವಿಧಾನ ಪಾರಂಪರಿಕ ವಿಧಾನದಲ್ಲಿ ಪ್ರಕೃತಿಯಲ್ಲಿ ಸಿಗುವಂತಹ ಕಾಯಿ, ಬಳ್ಳಿ, ಬಿಳಲು, ಸೊಪ್ಪು, ಮರದ ಚಕ್ಕೆ/ತೊಗಟೆ ಇವುಗಳನ್ನು ನೀರಿಗೆ ಹಾಕಿ ಮೀನು ಹಿಡಿಯುವ ವಿಧಾನವನ್ನು ಅಧ್ಯಯನ ಮಾಡಲಾಗಿದೆ. ಅವುಗಳೇ ಬ್ಯಾರಿಬಿತ್ತ್, ಕಾರೆಕಾಯಿ, ಒಡ್ಯೆಬಿಳಲು, ಮಡೆಂಜಿಬಿಳಲು, ತಿಪುಳು ಪಣೆ ಮರದ ಕಾಯಿ, ರಾಯಿ ಬೀಜ ಮರದ ಸೊಪ್ಪು, ಅದೆಂಜಿ ಮರದ ಚಕ್ಕೆ, ಕವಟೆ ಮರದ ಕಾಯಿ, ಐರೋಳು ಗೆಡ್ಡೆ, ನೊರೆಕಾಯಿ ಇವುಗಳನ್ನು ನೀರಿಗೆ ಹಾಕಿ ಮೀನು ಹಿಡಿಯುವ ವಿಧಾನವನ್ನು ವಿವರಿಸಿಕೊಳ್ಳಲಾಗಿದೆ. ಅಂತೆಯೇ ಆಧುನಿಕ ವಿಧಾನದಲ್ಲಿ ಮೈಲು ತುತ್ತು, ಎಂಡೋ ಸಲ್ಫಾನ್, ಪೆರಡಾನ್/ಪೆರಡಾಕ್ಸ್, ವೆಲ್ಪಿಂಗ್ ಸುಣ್ಣ ಇತ್ಯಾದಿ ಆಧುನಿಕ ಮಾರುಕಟ್ಟೆಯಲ್ಲಿ ದೊರೆಯುವ ಕ್ರಿಮಿನಾಶಕಗಳನ್ನು ಬಳಸಿ ಮೀನು ಹಿಡಿಯುವ ವಿಧಾನವನ್ನು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ವಸ್ತುಪರಿಕರಗಳನ್ನು ಬಳಸಿಕೊಂಡು ಮೀನು ಹಿಡಿಯುವ ವಿಧಾನವನ್ನು ವಿವರಿಸಿಕೊಳ್ಳಲಾಗಿದೆ. ಆಧುನಿಕ ಸಂದರ್ಭದಲ್ಲಿ ನಶಿಸುತ್ತಿರುವ ವಸ್ತುಪರಿಕರಗಳ ಪರಿಚಯದ ಜೊತೆಗೆ ಅದನ್ನು ಬಳಸಿಕೊಂಡು ಮೀನು ಹಿಡಿಯುವ ರೀತಿಯನ್ನು ಅನಾವರಣಗೊಳಿಸಲಾಗಿದೆ. ಮುಖ್ಯವಾಗಿ ಮಂಕರಿ/ಮಕ್ಕರಿ, ಕೂರಿ, ಕಾಂಡೇರಿ, ಕೋಜೋಲು, ಏಪೆ/ಏಂಪೆ, ಬಲೆ, ಒಣ ಅಡಿಕೆಮರ, ಬಿದಿರು, ಟೊಳ್ಳು ಮರ, ಬಟ್ಟಲು, ಭರ್ಚಿ ಇವೇ ಮುಂತಾದ ವಸ್ತುಗಳನ್ನು ಬಳಸಿಕೊಂಡು ಮೀನು ಬೇಟೆಯ ಕ್ರಮವನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಅಧ್ಯಾಯ ಆರರಲ್ಲಿ ತುಳು ಸಾಹಿತ್ಯದಲ್ಲಿ ಮೀನಿನ ಉಲ್ಲೇಖ. ಈ ಅಧ್ಯಾಯದಲ್ಲಿ ತುಳು ನಾಡಿನ/ ತುಳುಭಾಷೆಯ ಸಾಹಿತ್ಯದಲ್ಲಿ ಮುಖ್ಯವಾಗಿ ಕತೆಗಳಲ್ಲಿ ಮತ್ತು ಗಾದೆಗಳಲ್ಲಿ ಮೀನಿನ ಉಲ್ಲೇಖವಾಗಿರುವುದನ್ನು ವಿವರಿಸಿಕೊಳ್ಳಲಾಗಿದೆ. ಕತೆಗಳಲ್ಲಿ ಬಾಲೆ ಮೀನು/ಮುಗುಡು ಮೀನು ಆದ ಕತೆ, ಪೆರುವೋಲು/ಮಹಷಿರ್ ಮೀನ್/ಮಡೆಂಜಿ/ಗೆಂಡೆ ಮೀನು ಆದಕತೆ ಮತ್ತು ಮೀನ ಕುಮಾರನ ಕತೆಯನ್ನು ಉಲ್ಲೇಖಿಸಲಾಗಿದೆ. ಗಾದೆಗಳಲ್ಲಿ ಜನಪದರ ದಿನ ಬಳಕೆಯ ಮಾತಿನ ಸಂದರ್ಭದಲ್ಲಿ ಮೀನಿಗೆ ಸಂಬಂಧಿಸಿದ ಗಾದೆಗಳನ್ನು ಉಲ್ಲೇಖಿಸಲಾಗಿದೆ. ಈ ಸಂದರ್ಭದಲ್ಲಿ ಮೀನಿನ ವರ್ತನೆಯ ಜೊತೆಗೆ ಮನುಷ್ಯ ವರ್ತನೆಯ ಜೊತೆಗೆ ತಾಳೆ ಹಾಕುವ, ತುಲನೆ ಮಾಡುವ ಗಾದೆಗಳನ್ನು ಉಲ್ಲೇಖಿಸಲಾಗಿದೆ. ಒಟ್ಟು 6 ಅಧ್ಯಾಯಗಳಲ್ಲಿ ತುಳುನಾಡಿನ ಸಿಹಿನೀರು ಮೀನು ಬೇಟೆಗಾರಿಕೆಯ ವಿಧಾನವನ್ನು ಅಧ್ಯಯನ ಮಾಡಲಾಗಿದೆ. ಮೀನು ಬೇಟೆಗಾರಿಕೆಯಲ್ಲಿ ಆಧುನಿಕ ವಿಧಾನಗಳು ಒಕ್ಕರಿಸುತ್ತಿರುವ ಪ್ರಸ್ತುತ ದಿನಗಳಲ್ಲಿ ಈ ರೀತಿಯ ಅಧ್ಯಯನವು ತುಳುವರ ಪಾರಂಪರಿಕೆ ಬದುಕು/ ಮೀನು ಬೇಟೆಗಾರಿಕೆಯ ರೀತಿಯನ್ನು ಪರಿಚಯಿಸುವ ವಿಧಾನ ಈ ಅಧ್ಯಯನದಲ್ಲಿ ಮಾಡಲಾಗಿದೆ. ಅಳಿವಿನಂಚಿನಲ್ಲಿರುವ/ಮರೆಯಾಗುವ ಮೀನು ಬೇಟೆಗಾರಿಕೆಯ ವಸ್ತುಪರಿಕರ ವಿಧಾನಗಳನ್ನು ದಾಖಲಿಸುವ ಮುಖೇನ ಅವುಗಳ ಸ್ಥೂಲವಾದ ಪರಿಚಯ ನೀಡುವ ಇರಾದೆ ಈ ಅಧ್ಯಾಯದಲ್ಲಿ ನಡೆಸಲಾಗಿದೆ.

●●●●●●●●●●●

# ಅನುಬಂಧಗಳು



ಬಿಡು ಬಲೆ



ಗೋರು ಬಲೆ



ಕೆಳಗೆ ಸೀಸ ಇರುವ ಬಿಡು ಬಲೆ

(i)



ಕವಟೆ ಕಾಯಿ ಮರ


ಕವಟೆ ಕಾಯಿ ಮರ


ಬಿದಿರು ಕೂರಿ ಮುಂಭಾಗ


ಬಿದಿರು ಕೂರಿ


ತೆಂಗಿನ ಗರಿ ಕಡ್ಡಿಯ ಕೂರಿ


ಬ್ಯಾರಿಬಿತ್ತ್ ಗಿಡದ ಎಲೆ


ಬ್ಯಾರಿಬಿತ್ತ್


ಬ್ಯಾರಿಬಿತ್ತ್ ಕಾಳು


ರಾಯಿ ಬೀಜ ಮರದ ಸೊಪ್ಪು



ಓಟೆ ಕೂರಿ ಕಂಜಿಯ ಮುಂಭಾಗ



ಓಟೆ ಕೂರಿ ಕಂಜಿ



ಬೈನೆ ಮರದ ಕಡ್ಡಿಯ ಕೂರಿ



ತೆಂಗಿನ ಗರಿ ಕಡ್ಡಿಯ ಕೂರಿ



ತೆಂಗಿನ ಗರಿ ಕಡ್ಡಿಯ ಕೂರಿ



ಓಟೆ ಕೂರಿ



ಓಂಬದಿ ಕಟ್ಟಿದ ತೆಂಗಿನ ಗರಿ ಕಡ್ಡಿಯ ಕೂರಿ

(V)



ಮಂಕರಿ



ಬಿಡು ಬಲೆ ಮೇಲ್ಮಣಿ



ಬಿಡು ಬಲೆ ಕೆಳಮಣಿ



ಬೈನೆ ಮರದ ಕಡ್ಡಿಯ ಕೂರಿಯ ಮುಂಭಾಗ



ಬೈನೆ ಮರದ ಕಡ್ಡಿಯ ಕೂರಿ



ಕೊಕ್ಕೆ ಗಾಳ



ಮರಿಮೀನು ಸ್ವಚ್ಛಗೊಳಿಸುವ ವಿಧಾನ



ಪುರಿಯೊಳು ಮೀನು



ಕೀಜನ್ ಮೀನು

# ಪಾರಿಭಾಷಿಕ ಪದಗಳು

ಅಡ್ಕ = ವಿಶಾಲವಾದ ಹುಲ್ಲುಗಾವಲು ಪ್ರದೇಶ

ಅರಿಕೆ = ಮರವನ್ನು ಅಪ್ಪಿಕೊಂಡು ಬೆಳೆಯುವ ಬಳ್ಳಿ.

ಇಲ್ಲ್ ಬೂರು = ಮನೆ ಕಟ್ಟಲು ಬಳಸುವ ಚಿಕ್ಕ ಗಾತ್ರದ ಬಳ್ಳಿ

ಇಲ್ಲ್ = ಮನೆ

ಉಬೆರ್ = ಮಳೆಗಾಲದಲ್ಲಿ ಮೀನುಗಳು ಮೊಟ್ಟೆ ಇಡಲು ತೋಡುಗಳಿಗೆ ಹತ್ತುವುದಕ್ಕೆ ಉಬೆರ್ ಎಂದು ಹೇಳುತ್ತಾರೆ.

ಕಂಜಿ = ಕರು

ಕಡಮ್ಮ = ಕಡವೆ

ಕಣೆರ್ = ಬಣ್ಣ, ಒಗರು

ಕಯ = ಹೆಚ್ಚು ನೀರಿನ ಆಳವಿರುವ ಗುಂಡಿ.

ಕುಂಞ = ಚಿಕ್ಕ ಕತ್ತಿ

ಕುದ್ಕಮುಂಚಿ = ನರಿ ಮೆಣಸು

ಕುಯ್ಯಲ = ನೆಲದಲ್ಲಿ ಹರಿದಾಡುವ / ಗಿಡವನ್ನು ಆಶ್ರಯಿಸಿರುವ ಬಳ್ಳಿ

ಕುರ್ಡಿ = ಕಣ್ಣು ಕಾಣದವಳು

ಕೆಡು = ಮನುಷ್ಯನ ದೇಹದಲ್ಲಿ ಬೆಳೆಯುವ ಉಣ್ಣೆ ಗಾತ್ರದ ದುರ್ಮಾಂಸ

ಕೈಯೋಲಿ = ಕಾಡಿನಲ್ಲಿರುವ ಚಿಕ್ಕ ಗಾತ್ರದ ಗಿಡ

ಕೊಂತಿ ಮೀನು = ಉದ್ದವಾಗಿರುವ ಮೊಸಳೆಯ ಹಾಗೆ ಉದ್ದ ಬಾಯಿಯನ್ನು ಹೊಂದಿದ್ದು ಬಾಯಿಯಷ್ಟು ವಿಸ್ತಾರಕ್ಕೆ ಗರಗಸದ ರೀತಿಯಲ್ಲಿ ಚಿಕ್ಕ-ಚಿಕ್ಕ ಹಲ್ಲುಗಳನ್ನು ಹೊಂದಿರುವ ಮೀನು

ಗಂಡಿ = ಆಯ ಕಟ್ಟಿನ ಸ್ಥಳ

ತರು = ಚಿಕ್ಕ ಮೀನು

ದೂಪೆ = ಹೆಣ ಸುಟ್ಟ ಜಾಗವನ್ನು ಚಿಕ್ಕ ದಿಬ್ಬವಾಗಿ ಮಾರ್ಪಡಿಸಿದ ಸ್ಥಳ

ನಕೆ = ಕಾಡಿನಲ್ಲಿ ಬೆಳೆಯುವ ಒಂದು ಜಾತಿಯ ಗಡ್ಡೆ

ನೆಲಗುರಿ = ಭತ್ತ ಕುಟ್ಟಲು ನೆಲದಲ್ಲಿ ಅಂಗಳದಲ್ಲಿ, ಕೊಟ್ಟಿಗೆಯಲ್ಲಿ ಹೂತಿರುವ, ಸ್ವಲ್ಪ ಆಳವಿರುವ ಕಲ್ಲು. ಸಾಮಾನ್ಯವಾಗಿ ಸಾಂಬಾರು ಅರೆಯುವ ಕಲ್ಲಿನ ಆಳದಷ್ಟಿರುತ್ತದೆ.

ನೆರು = ಓಟೆಯನ್ನು ಚಿಕ್ಕ ಗಾತ್ರವಾಗಿ ಸೀಳಿದ ಪಟ್ಟಿ.

ಬೆರೆ ಬೆರೆ = ಒಂದೇ ಸಮನೆ

ಪೊಟ್ಟ ಹಕ್ಕಿ = ಮಂಗಟೆ ಹಕ್ಕಿ

ಪೊಟ್ಟ = ಕಿವಿ ಕೇಳದವ

ಬಿತ್ತ್ = ಬೀಜ.

ಮರ್ದ್ = ಮದ್ದು / ವಿಷ

ಮೀನ್‌ಕುರ್ವೆ = ಕಾಡಿನಲ್ಲಿ ಸಿಗುವ ಚಿಕ್ಕ ಬಳ್ಳಿಯಿಂದ ನೀರಿನ ಹೂಜಿಯ ಆಕಾರದಲ್ಲಿ ಹೆಣೆದು ಮೀನು ಹಾಕಲು ಬಳಸುವ ವಸ್ತು.

ಮೈಮು = ಹಿಡಿಸೂಡಿ

# ಪರಾಮರ್ಶನ ಗ್ರಂಥಗಳು


1. ಉಮೇಶ್ ಹೊಸಹಳ್ಳಿ : 2011, ಶಿಕಾರಿ ಲೋಕ (ಭಾಗ-2), ಪುಣ್ಯ ಗಂಗಾ ಪ್ರಕಾಶನ, ಪ್ರಕಾಶಕರು, ಉಮೇಶ್ ಹೊಸಹಳ್ಳಿ ಸ.ಪ.ಪೂ. ಕಾಲೇಜು ವಿದ್ಯಾನಗರ
2. ಕೆದಂಬಾಡಿ ಜತ್ತಪ್ಪ ರೈ : 1998, ಬೇಟೆಯ ನೆನಪುಗಳು ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು
3. ಕೆದಂಬಾಡಿ ಜತ್ತಪ್ಪ ರೈ : 1998, ಬೇಟೆಯ ಉರುಳು, ಭಾರಧ್ವಾಜ ಪ್ರಕಾಶನ ಕದಿರೆ ಮಂಗಳೂರು ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು
4. ದೇವೆಂದ್ರ ಕುಮಾರ ಹಕಾರಿ, ಕೆ.ಆರ್ ಸಂಧ್ಯಾ : 2000, ಗ್ರಾಮೀಣ ಬೇಟೆಗಳು ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು-560018
5. ನರೇಂದ್ರ ರೈ ದೇರ್ಲ : 1995, ಕನ್ನಡದಲ್ಲಿ ಬೇಟೆ ಸಾಹಿತ್ಯ, ಕರ್ನಾಟಕ ಸಂಘ, ಪುತ್ತೂರು ದ.ಕ 574201
6. ನರೇಂದ್ರ ರೈ ದೇರ್ಲ : 2009, ಬೇಟೆ ಪ್ರಭುತ್ವದಿಂದ ಪ್ರಜಾಪ್ರಭುತ್ವದೆಡೆಗೆ, ಕನಸು ಪ್ರಕಾಶನ ಮಾಡಾವು ಪುತ್ತೂರು ತಾಲೂಕು ದ.ಕ
7. ಪ್ರಭಾಕರ ಶಿಶಿಲ : 1985, ಶಿಕಾರಿಯ ಶೀಳು ನೋಟ, ಸ್ವಂತಿಕ ಪ್ರಕಾಶನ, ಕಾವ್ಯ ಕಾಂತಮಂಗಳ ಪೋಸ್ಟ್ ಅಜ್ಜಾವರ ಸುಳ್ಯ ದ.ಕ
8. ವಿವೇಕ ರೈ ಬಿ.ಎ : 1985, ತುಳು ಜನಪದ ಸಾಹಿತ್ಯ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 560018
9. ವಿವೇಕ ರೈ ಬಿ.ಎ : 1989, ಶ್ರೀ ಪೆರುವಾಯಿ ಸುಬ್ಬಯ್ಯ ಶೆಟ್ಟಿಯವರ ತುಳು ಗಾದೆಗಳು, ಮಂಗಳೂರು ವಿಶ್ವವಿದ್ಯಾನಿಲಯ ಮಂಗಳ ಗಂಗೋತ್ರಿ 574199
10. ವಿಶ್ವನಾಥ ಬದಿಕಾನ : 2016, ಅರೆಬಾಸೆನ ಅಜ್ಜಿ ಕತೆಗ, ನೇಹಾ ಕ್ರಿಯೇಷನ್ಸ್ ಕರೆ ಸಂದ್ರ ಬನಶಂಕರಿ ಎರಡನೇ ಹಂತ ಬೆಂಗಳೂರು 560070

# ಮಾಹಿತಿದಾರರ ವಿಳಾಸ

1. ಕೃಷ್ಣಪ್ಪ : 47 ವರ್ಷ ಕೈರೋಳಿ ನಿಡ್ಲೆ, ಬೆಳ್ತಂಗಡಿ ತಾಲೂಕು, ದ.ಕ.
2. ಕೆಂಚ : 68 ವರ್ಷ ಕೊಲ್ಲಾಜೆ ಪಲಿಕೆ ಹಿರೆಬಂಡಾಡಿ ಪುತ್ತೂರು ತಾಲೂಕು ದ.ಕ
3. ಗಂಗಯ್ಯ : 48 ವರ್ಷ ಸುಳಿ, ಕಕ್ಕೆ ಪದವು ಬಂಟ್ವಾಳ ತಾಲೂಕು ದ.ಕ
4. ಗುರುವ : 65 ವರ್ಷ ಒಳಗುಡ್ಡೆ ವಳಂಬ್ರ ಕಡಿರುದ್ಯಾವರ ಬೆಳ್ತಂಗಡಿ ತಾಲೂಕು ದ.ಕ
5. ಚಂದ್ರ : 45 ವರ್ಷ ಜಪ್ತಿ ಕುಂದಾಪುರ, ಉಡುಪಿ ಜಿಲ್ಲೆ
6. ಚೋಮು : 65 ವರ್ಷ ಕುರುಂಜ ಮನೆ, ಶಿಬಾಜೆ, ಬೆಳ್ತಂಗಡಿ ತಾಲೂಕು, ದ.ಕ.
7. ತುಕರಾಮ ಪೂಜಾರಿ : 60 ವರ್ಷ, ಸ್ಥಾಪಕಧ್ಯಕ್ಷರು, ಸಂಚಯಗಿರಿ, ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರ, ಬಿ.ಸಿ. ರೋಡ್, ಬಂಟ್ವಾಳ ತಾಲೂಕು, ದ.ಕ.
8. ಪುಟ್ಟಣ್ಣ : 60 ವರ್ಷ ಬಜೆತ್ತಡ್ಕ ಕುಟ್ರುಪಾಡಿ ಗ್ರಾಮ ಕಡಬ ಪೋಸ್ಟ್ ಕಡಬ, ತಾಲೂಕು ದ.ಕ
9. ಪ್ರಕಾಶ್ : 38 ವರ್ಷ ಮೂಡಬಿದ್ರೆ ದ.ಕ
10. ಬಾಬು : 57 ವರ್ಷ ಬೊಳ್ಮನಾರ್ ಪುದುವೆಟ್ಟು ಬೆಳ್ತಂಗಡಿ ತಾಲೂಕು, ದ.ಕ.
11. ಮುದರ : 64 ವರ್ಷ ಹಸನಡ್ಕ ಸುಳ್ಯ ತಾಲೂಕು
12. ಮುದರ : 60 ವರ್ಷ ಅಮ್ಮೆ ಮನೆ, ಕುಟ್ರುಪಾಡಿ ಗ್ರಾಮ ಕಡಬ ಪೋಸ್ಟ್ ಕಡಬ ತಾಲೂಕು, ದ.ಕ.
13. ರಾಮು ಪಿ. : 60 ವರ್ಷ ಪಲ್ಲದಕೋಡಿ ನಿಡ್ಲೆ, ಬೆಳ್ತಂಗಡಿ ತಾಲೂಕು, ದ.ಕ.
14. ಡಾ. ಬಿ.ಎ. ವಿವೇಕ ರೈ : 70 ವರ್ಷ, ಸುಯಿಲ್ ಮೋರ್ಗನ್ಸ್‌ಗೇಟೆ ಮಂಗಳೂರು, ದ.ಕ.
15. ಡಾ. ಶಿವರಾಮ್ : 54 ವರ್ಷ, ಪುಡಿಂಕಲ್, ಉದನೆ, ಪುತ್ತೂರು ತಾಲೂಕು, ದ.ಕ.
16. ಡಾ. ಸತೀಶ್ : 42 ವರ್ಷ, ಚಿತ್ರಾಪು, ಮುಲ್ಕಿ, ಮಂಗಳೂರು ತಾಲೂಕು ದ.ಕ
17. ಸುಂದರ : 44 ವರ್ಷ ಕೈರೋಳಿ ನಿಡ್ಲೆ ಬೆಳ್ತಂಗಡಿ ತಾಲೂಕು, ದ.ಕ.
18. ಸುಂದರ : 48 ವರ್ಷ ಶಿರ್ತಾಡಿ ಮೂಡಬಿದ್ರೆ ದ.ಕ
19. ಮಾಯಿಲ ಮಂಚಿ : 48ವರ್ಷ, ಮಂಚಿ ಬಂಟ್ವಾಳ-574321, ದ.ಕ.